# ವಾನಸಿ

ತಿಂಗಳ ಪತ್ರಿಕೆ

ಸೆಪ್ಟೆಂಬರ್ : 2000

- ❄ ‘ಗಂಡಸಿನ ಪ್ರಪಂಚದೊಳಗೆ ಮಹಿಳೆ’
- ❄ ಯಡವನಹಳ್ಳಿ ಜಾತ್ರೆ - ಸಂತ್ರಸ್ತರು
- ❄ ಶಾಲೆಗಳಲ್ಲಿ ಲಿಂಗತಾರತಮ್ಯ
- ❄ ‘ಲೈಂಗಿಕ ದೌರ್ಜನ್ಯ’ ಬಗ್ಗೆ ಕಾಲ್ಪನಿಕತೆ ಹಾಗೂ ವಾಸ್ತವತೆ
- ❄ ಶಾಲೆಗಳಲ್ಲಿ ಲಿಂಗತಾರತಮ್ಯ
- ❄ “ಬಾನು ಬಹಿಷ್ಕಾರ”

# ಮಾನಸ

ತಿಂಗಳ ಪತ್ರಿಕೆ

ಸಂಪುಟ : 15 ಸಂಚಿಕೆ : 9

ಸೆಪ್ಟೆಂಬರ್ : 2000





ವಿಳಾಸ

"ಮಾನಸ" ತಿಂಗಳ ಪತ್ರಿಕೆ

ಪಂಚಾಯಿತಿ ರಸ್ತೆ

ಕಾಡುಗೋಡಿ ಪೋಸ್ಟ್

ಬೆಂಗಳೂರು - 560 067

ಸೂಚನೆ : ಬಿಡಿ ಪ್ರತಿ **3-00** ರೂ.

ವಾರ್ಷಿಕ ಚಂದಾ **40-00** ರೂ.

ಒಂದು ವಿಶೇಷ ಸಂಚಿಕೆಯೊಂದಿಗೆ

ಒಟ್ಟು ಹನ್ನೊಂದು ಸಂಚಿಕೆಗಳು


## *ಈ ಸಂಚಿಕೆಯಲ್ಲಿ......*


'ಗಂಡಸಿನ ಪ್ರಪಂಚದೊಳಗೆ ಮಹಿಳೆ'

*ಎಚ್. ಎಸ್. ಚಂಪಾವತಿ*

ಯಡವನಹಳ್ಳಿ ಜಾತ್ರೆ -ಸಂತ್ರಸ್ತರು

*ಮೀರಾನಾಯಕ,ಮೈಸೂರು*

"ಬಾನು ಬಹಿಷ್ಕಾರ"

*ಸತ್ಯನಾರಾಯಣ್ ಎಚ್.ಎಸ್.*

ಹಿರೋಶಿಮಾದಲ್ಲಿ ಕನ್ನಡತಿಯರು

*ನಾಗೇಶ್ ಹೆಗಡೆ*

ಶಾಲೆಗಳಲ್ಲಿ ಲಿಂಗತಾರತಮ್ಯ

*ಪಾರ್ವತಿ ಜಿ. ಐತಾಳ್*

'ಲೈಂಗಿಕ ದೌರ್ಜನ್ಯ' ಕಾಲ್ಪನಿಕತೆ ಹಾಗೂ ವಾಸ್ತವತೆ

*ಮೂಲ : ಡಾ|| ಪ್ಯಾಕ್ಟ್ಸ್ ಯಂಡ್ ಮಿಥ್ಸ್*

*ಕನ್ನಡಕ್ಕೆ : ಡಾ|| ವಸುಂಧರಾ ಭೂಪತಿ*

ಐರಿಷ್ ಬೆಣ್ಣೆಯ ಕಥೆ

ಗೆಲುವು ನಮ್ಮದೇ

*ರೂಪ*





ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ

ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - ೫೬೦ ೦೬೭



# ಸಂಪಾದಕೀಯ

ಉದ್ಯೋಗ, ನೀರು, ವಸತಿ ವಿದ್ಯುಚ್ಛಕ್ತಿಯಂತಹ ಮೂಲಭೂತ ಅಗತ್ಯಗಳು ಇಂದು ಕಾಣೆಯಾಗತೊಡಗಿವೆ, ಜಾಗತೀಕರಣ, ಆರ್ಥಿಕ ಮುಕ್ತ ನೀತಿಗಳು ರೈತರನ್ನು ಮೂಲೆಗುಂಪು ಮಾಡತೊಡಗಿವೆ. ದೇಶದ ಪ್ರಗತಿಯ ಹೆಸರಿನಲ್ಲಿ ದೊಡ್ಡ ದೊಡ್ಡ ಅಣೆಕಟ್ಟುಗಳು ಆದಿವಾಸಿ ಹಾಗೂ ಬಡಜನರನ್ನು ಸ್ಥಳಾಂತರಗೊಳಿಸತೊಡಗಿವೆ. ಮೂಲಭೂತ ವಾದಿಗಳು ಎಲ್ಲೆಲ್ಲೂ ಹಿಂಸೆಯನ್ನು ಹುಟ್ಟುಹಾಕುತ್ತಿದ್ದಾರೆ. ಸರ್ಕಾರಗಳು, ಪ್ರಭುತ್ವ ವಾಸ್ತವದಲ್ಲಿ ಜನರ ಸಮಸ್ಯೆಗಳಿಗೆ ತುಡಿಯಲಾಗದಂತಹ ಬಿಕ್ಕಟ್ಟುಗಳನ್ನು, ಒತ್ತಡಗಳನ್ನು ಹೊಂದಿವೆ. ಜೊತೆಗೆ ಪ್ರಭುತ್ವದ ವೈರುಧ್ಯಗಳು ಕಣ್ಣಿಗೆ ಕಾಣುವಷ್ಟು ಸ್ಪಷ್ಟವಾಗಿವೆ. ಜನಾಂದೋಳನಗಳನ್ನು ಬಗ್ಗು ಬಡಿಯುವ ಹುನ್ನಾರದಲ್ಲಿರುವ ಪ್ರಭುತ್ವ ಅದೇ ಭಾಷೆ, ಲಯಗಳನ್ನೂ ಸಹ ಬಳಸಿಕೊಳ್ಳುತ್ತಿದೆ. ಜನಾಂದೋಲನಗಳನ್ನು ಮೃದುಗೊಳಿಸಲು ಅದೇ ಸ್ತರಗಳಲ್ಲಿ ಸುಧಾರಣೆಯ ಕೆಲಸಗಳನ್ನೂ ಸಹ ಪ್ರಾಜೆಕ್ಟ್ ರೂಪದಲ್ಲಿ ಹಮ್ಮಿಕೊಳ್ಳುತ್ತಿವೆ. ಹಾಗೆ ಜನಾಂದೋಳನಗಳನ್ನು ಒಳಗೊಳ್ಳಲು ಸಾಧ್ಯವಾಗದಂತಹ ಸಂದರ್ಭದಲ್ಲಿ ಪೋಲೀಸ್, ಇತರ ರಾಜಕೀಯ ಮೆಷಿನರಿಗಳನ್ನು ಜನಾಂದೋಳನ ಬಗ್ಗು ಬಡಿಯಲು ರಾಜಾರೋಷವಾಗಿ ಬಳಸುತ್ತಾ ಬಂದಿವೆ.

ಪ್ರಜಾಪ್ರಭುತ್ವದ ಈ ನಾಡಿನಲ್ಲಿ ಪ್ರಭುತ್ವವನ್ನು ಎದುರಿಸಲು, ನಮ್ಮನ್ನು ಜೀವಂತವಾಗಿಟ್ಟುಕೊಳ್ಳಲು ಜನಾಂದೋಳನಗಳಷ್ಟೇ ಅಸ್ತ್ರ. ಚಳುವಳಿಗಳು ಚಿಕ್ಕ ಚಿಕ್ಕ ಹಂತದಲ್ಲಿ ನಡೆಯುತ್ತಿರಬಹುದು. ಚಿಕ್ಕ ಚಿಕ್ಕ ಗುಂಪುಗಳಲ್ಲಿ ನಡೆಯುತ್ತಿರಬಹುದು. ಆದರೂ ದೇಶದಾದ್ಯಂತ ನಡೆಯುವ ಇಂತಹ ಸಣ್ಣಸಣ್ಣ ಚಳುವಳಿಯ ರೂಪಗಳೇ ನಮ್ಮ ಜೀವಂತಿಕೆಯನ್ನು, ಭ್ರಷ್ಟತ್ವದ ವಿರುದ್ಧ ನಮ್ಮ ಧ್ವನಿಯನ್ನು ಹೆಚ್ಚಿಸಬೇಕು ಹಾಡು, ನಾಟಕಗಳು ಇಂದಿಗೂ ಚಳುವಳಿಯ ಬೆನ್ನೆಲುಬುಗಳು. ನಮ್ಮ ಹೋರಾಟದ ಸ್ಫೂರ್ತಿಯನ್ನು ಕಾಯುವ ಚಿಲುಮೆಗಳು. ನರ್ಮದಾ ಹೋರಾಟವಾಗಲೀ, ಆದಿವಾಸಿಗಳ ಹೋರಾಟವಾಗಲೀ, ದಲಿತರ ಹೋರಾಟವಾಗಲೀ ಯಾವುದೇ ಹೋರಾಟದ ಹಿನ್ನೆಲೆಯಲ್ಲಿನ ಹಾಡು, ನಾಟಕಗಳು, ಚಳುವಳಿಗಳೂ ಇಂದಿಗೂ ನಮ್ಮ ಪ್ರಜಾಪ್ರಭುತ್ವದ ಆಶೆಯಗಳನ್ನು ಎತ್ತಿಹಿಡಿಯುವ ನಂದಾ ದೀಪಗಳಾಗಿವೆ.

○

# 'ಗಂಡಸಿನ ಪ್ರಪಂಚದೊಳಗೆ ಮಹಿಳೆ'

## ('ವುಮನ್ ಇನ್ ಎ ಮ್ಯಾನ್ಸ್ ವರ್ಲ್ಡ್')

ಕಾದಂಬರಿಯ ತರಹ ಓದಿಸಿಕೊಂಡು ಹೋಗುವ ಈ ಕೃತಿ ಕಾದಂಬರಿಯಲ್ಲ. ಒಬ್ಬ ಚಿಕ್ಕ ಹುಡುಗಿ ದೊಡ್ಡ ಡಾಕ್ಟರ್ ಆಗಿರುವ ಬಗೆಯನ್ನು ಇದರಲ್ಲಿ ವಿವರಿಸಲಾಗಿದೆ. ಕೋನಿ ಗ್ಯೂಆನ್‌ಳನ್ನು ಅಮೆರಿಕೆಯಲ್ಲಿ ದೊಡ್ಡ ಡಾಕ್ಟರ್ ಎಂದು ಭಾವಿಸಲಾಗಿದೆ. ಇಡಿಯ ಜನಾಂಗದ ಬಗ್ಗೆ ಕಳಕಳಿಯಿದ್ದ ಕೋನಿ ಗ್ಯೂಆನ್ ಅಮೆರಿಕೆಯ ಹಾಸ್ಪೆಟಲ್ ಕ್ಲಿನಿಕ್‌ಗಳಲ್ಲಿ ಔಷಧಿಗಳ ಶಿಕ್ಷಕಿಯಾದ ಮೊದಲ ಮಹಿಳೆ. ಅರ್ಧ ಶತಮಾನಗಳಿಗಿಂತ ಹೆಚ್ಚು ಕಾಲ ಕಾರ್ನೆಲ್ ಮೆಡಿಕಲ್ ಕಾಲೇಜಿನಲ್ಲಿ ಈಕೆ ಶಿಕ್ಷಕಿಯಾಗಿದ್ದಳು. 'ನ್ಯೂಯಾರ್ಕ್' ಆಸ್ಪತ್ರೆಯನ್ನು ನೋಡಿಕೊಳ್ಳುತ್ತಿದ್ದ ಸದಸ್ಯರಲ್ಲಿಯೂ ಈಕೆ ಸದಸ್ಯೆ. ಈಕೆಯೇ ಮೊಟ್ಟ ಮೊದಲ ಮಹಿಳಾ ಸದಸ್ಯೆ. 'ನ್ಯೂಯಾರ್ಕ್' ಆಸ್ಪತ್ರೆಯಲ್ಲಿರುವ 'ದಿ ಡಾಕ್ಟರ್ ಕೋನಿ' ಗ್ಯೂಯಾನ್ ಕಟ್ಟಡದಲ್ಲಿ 80 ಕ್ಲಿನಿಕ್‌ಗಳಿವೆ. ಡಾಕ್ಟರ್ ಕೋನಿ ಗ್ಯೂಯಾನ್ ಒಬ್ಬ ಕುಟುಂಬ ವೈದ್ಯೆಯಾಗಿ ಪರಿಚಿತಳಾಗಿದ್ದಳು. ಕಾಯಿಲೆಯಾದವರ ಕಾಯಿಲೆಯನ್ನು ಅರಿತುಕೊಳ್ಳುವ ಜೊತೆಗೆ ಮನುಷ್ಯರನ್ನು ಅರ್ಥಮಾಡಿಕೊಳ್ಳುವ ಹೃದಯವಂತಿಕೆ ಕೂಡಾ ಈಕೆಗಿತ್ತು. ಈಕೆ ಹೊಸ ಬಗೆಯ 'ಕ್ಲಿನಿಕಲ್ ಕೇರ್'ನ್ನು ಈ ಜಗತ್ತಿಗೆ ಪರಿಚಯಿಸಿಕೊಟ್ಟ ಮಹಿಳೆ.

ತಾಯಿಯ ಹೆರಿಗೆಯ ಸಂದರ್ಭದಲ್ಲಿ ಡಾಕ್ಟರನ್ನು ಕರೆ ಎಂದು ತಾಯಿ ಮಿಸೆಸ್ ಗ್ಯೂಯಾನ್ ಕೋನಿಯನ್ನು ಕಳಿಸುತ್ತಾಳೆ. 'ಮಗು ಹೊರ ಬರುತ್ತಿದೆಯೇ' ಎಂದು ಕೇಳಿಕೊಂಡು ಓಡುವ ಕೋನಿ ಕೂಡಾ ಆಗ ಪುಟ್ಟ ಮಗುವೇ. ಐದು ವರ್ಷದ ಮಗು ಕೋನಿ 1887ರ ಸುಮಾರಿಗೆ 'ಫಾರಂ'ನಲ್ಲಿ ಬಾಲ್ಯವನ್ನು ಕಳೆದವಳು. ನೀಗ್ರೋಗಳಿಗೆ ಸ್ವಾತಂತ್ರ್ಯ ಬೇಕು ಎಂದು ಚಳುವಳಿ ನಡೆದು ಇಪ್ಪತ್ತೆರಡು ವರ್ಷಗಳು ಕಳೆದಿದ್ದವಷ್ಟೆ. ಬಹಳಷ್ಟು ಸ್ಥಳಗಳಲ್ಲಿ ಬಿಳಿಯರು, ಕರಿಯರು ಒಟ್ಟಿಗೆ ಕೆಲಸ ಮಾಡುತ್ತಿರಲಿಲ್ಲ. ಆದರೆ ಕೋನಿಯ ತಂದೆಯ ಫಾರಂನಲ್ಲಿ, ಬಿಳಿಯರು, ಕರಿಯರು ಒಟ್ಟಿಗೆ ಕೆಲಸ ಮಾಡುತ್ತಿದ್ದರು.

ತಾಯಿಯ ಹೆರಿಗೆಯ ಸಂದರ್ಭದಲ್ಲಿ ಹತ್ತಿರವೇ ನಿಂತು ನೋಡಿದ ಕೋನಿ ಗ್ಯೂಯಾನ್‌ಗೆ ಬದುಕಿನ ಸಂದರ್ಭಗಳಲ್ಲಿ ಡಾಕ್ಟರ್‌ರ ಅವಶ್ಯಕತೆ ಅರ್ಥವಾಗುತ್ತಾ ಬಂದಿರಬೇಕು.

ಶಾಲೆಗೆ ಹೋಗುವ ಸೌಲಭ್ಯಗಳಿಲ್ಲದೇ ಇದ್ದುದರಿಂದ ತಾಯಿ ಕೇಟ್ ಮಕ್ಕಳಿಗೆ ಪುಸ್ತಕಗಳನ್ನು ಓದಿ ಹೇಳುತ್ತಿದ್ದಳು. ಸ್ಕೂಲಿಗೆ ಹೋಗದಿದ್ದರೂ ಪುಸ್ತಕಗಳನ್ನು ಪ್ರೀತಿಸುವುದನ್ನು ತನ್ನ ಮಕ್ಕಳು ಕಲಿಯಬೇಕೆಂಬುದು ಆಕೆಯ ಮಹಾತ್ವಾಕಾಂಕ್ಷೆಯಾಗಿತ್ತು.

ದೊಡ್ಡ ಕುಟುಂಬದಲ್ಲಿ ಅಂದರೆ ಹನ್ನೆರಡು ಮಕ್ಕಳ ಜೊತೆ ಬೆಳೆದ ಕೋನಿ ತನಗಿಂತ ಚಿಕ್ಕವರನ್ನು ನೋಡಿಕೊಳ್ಳುವ ಜವಾಬ್ದಾರಿಯನ್ನು ಹೊತ್ತಿದ್ದಳು. ತಾಯಿ ಕರೆದಾಗ ಆಕೆಗೆ ಸಹಾಯ ಮಾಡುತ್ತಿದ್ದಳು. ಒಂದು ದಿನ ಆಕೆಯ ತಾಯಿ 'ಕಾಯಿಲೆಯ ಮನುಷ್ಯರನ್ನು ನೋಡಲು ಹೋಗುತ್ತಿದ್ದೇನೆ ಬರುತ್ತೀಯ' ಎಂದು ಕರೆದಾಗ ಕೋನಿ ಕುತೂಹಲದಿಂದ ಹಿಂಬಾಲಿಸುತ್ತಾಳೆ. ದಾರಿಯ ಮಧ್ಯೆ ಕುದುರೆ ಗಾಡಿ ನಿಲ್ಲಿಸಿ ಕೆರೆಯಲ್ಲಿರುವ ಬಿಳಿಯ ಮಣ್ಣನ್ನು ತಾ ಎಂದು ತಾಯಿ ಹೇಳುತ್ತಾಳೆ. ಕೋನಿ ಉಡುಪನ್ನು ಮಡಚಿ, ನದಿಯೊಳಗೆ ಇಳಿದು ತರುವ ಬಿಳಿಯ ಮಣ್ಣು ಅವರ 'ಫಾರಂ'ನಲ್ಲಿ ಕೆಲಸ ಮಾಡುವ ನೋಹ್ ಎಂಬುವನ ಕುತ್ತಿಗೆಯ ಬಳಿಯ ಕುರುಕ್ಕೆ ಬೇಕಾದದ್ದು. ಕುತ್ತಿಗೆಯ ಮೇಲೆ ತಾಯಿ ಕೇಟ್ ಬಿಳಿಯ ಮಣ್ಣನ್ನು ಸವರುವಾಗ ಕತೆ ಹೇಳುತ್ತಾ ತಿಕ್ಕುತ್ತಾಳೆ. ಕೋನಿಗೆ ಆಶ್ಚರ್ಯ. ತಾಯಿ ಕಥೆ ಹೇಳುವ ಅವಶ್ಯಕತೆ ಏನೆಂದು ಪುಟ್ಟ ಕೋನಿ ವಿಚಾರಿಸುತ್ತಾಳೆ. ಕಾಹಿಲೆಯವರ ಬಗ್ಗೆ ನಿನಗೆ ಹೇಳುತ್ತೇನೆ ಎನ್ನುವ ತಾಯಿ ಅವರ ದೇಹಕ್ಕೆ ಏನಾಗಿದೆ ಎಂಬುದು ಎಷ್ಟು ಮುಖ್ಯವೋ ಅವರ ತಲೆಯಲ್ಲಿ ಏನು ನಡೆಯುತ್ತಿದೆ ಎಂಬುದೂ ಅಷ್ಟೇ ಮುಖ್ಯ. ಕೆಲವು ಸಲ 'ನಗು' ಹೆಚ್ಚು ದುಬಾರಿಯ ಔಷಧಿಗಳಿಗಿಂತ ಮುಖ್ಯ ಔಷಧಿಯಾಗುತ್ತದೆ ಎನ್ನುತ್ತಾಳೆ. ಕೋನಿ ಮುಂದೆ ದೊಡ್ಡ ಡಾಕ್ಟರ್ ಆದಾಗ ತಾಯಿಯ ಈ ನುಡಿಗಳು, ವರ್ತನೆಗಳು ಕಾಹಿಲೆಯ ಮನುಷ್ಯರನ್ನು ಅರ್ಥ ಮಾಡಿಕೊಳ್ಳುವ ಹಿನ್ನೆಲೆಯಲ್ಲಿ ಪ್ರಭಾವ ಬೀರಿದ್ದಂತೂ ನಿಜ.

ಆಲಸ್ ಕೋನಿಯ ಸಂಬಂಧಿ. ಅಮೆರಿಕೆಯ 'ಸಿವಿಲ್‌ವಾರ್'ನಲ್ಲಿ ಗಂಡ/ಮಕ್ಕಳನ್ನು ಕಳೆದುಕೊಂಡ ಈಕೆ ಗ್ಯೂಯಾನ್ಸ್ ಕುಟುಂಬದ ಜೊತೆ ಒಂದಾಗಿ ಬದುಕುತ್ತಾಳೆ. ಕೋನಿಯ ತಾಯಿ ಕೇಟ್ ಗ್ಯೂಯಾನ್ ತರಹ ಈಕೆ ಕೂಡಾ ಮಕ್ಕಳಿಗೆ ಪುಸ್ತಕದ ಬಗ್ಗೆ, ಸಂಗೀತದ ಬಗ್ಗೆ ಪ್ರೀತಿ ಉಂಟಾಗುವಂತೆ ಮಾಡುವಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತಾಳೆ. ಹೀಗೆಯೇ ಕೇಟ್ ಒಮ್ಮೆ ಕತೆ ಪುಸ್ತಕ ಓದುತ್ತಿರುವಾಗ ಮಕ್ಕಳೆಲ್ಲ ನೆಲದ ಮೇಲೆ ಮಲಗಿ ಕತೆ ಕೇಳುತ್ತಿರುತ್ತಾರೆ. ಆ ಕತೆಯಲ್ಲಿ ಲಿಟಲ್ ನೆಲ್ ಎಂದು ಕರೆಯಲ್ಪಡುವ ಚಿಕ್ಕ ಹುಡುಗಿ ಸಾಯುವ ಸಂದರ್ಭ.

ಮಕ್ಕಳಿಗೆಲ್ಲ ಅತೀವ ದುಃಖವಾಗತೊಡಗಿತ್ತು. ಕತೆ ಕೇಳುತ್ತಾ 'ಬಡವರನ್ನು ಡಾಕ್ಟರ್ ಕಾಳಜಿ ವಹಿಸಿ ನೋಡುತ್ತಾರಲ್ಲ?' ಕೋನಿ ತಾಯಿಯನ್ನು ಕೇಳಿದಳು. ಕೇಟ್ ಗ್ಯುಯಾನ್ ಈ ಮಾತನ್ನು ಒಪ್ಪಿಕೊಳ್ಳುತ್ತಾಳೆ. ಆಕೆಯ ತಂದೆ ಡಾಕ್ಟರ್. ಆತನ ಹತ್ತಿರ ಬರುತ್ತಿದ್ದವರೆಲ್ಲಾ ದುಡ್ಡು ಕೊಡಲಾರದ ಬಡ ಮಂದಿ. ಆತನ ಐದು ಜನ ಸಹೋದರರೂ ಸಹ ಡಾಕ್ಟರ್ಸ್. ಈ ಇತಿಹಾಸವನ್ನು ಕೇಳಿದಾಗ ಕೋನಿ ತಾನೂ ಡಾಕ್ಟರ್ ಆಗುವುದಾಗಿ ನುಡಿಯುತ್ತಾಳೆ. ಆಕೆಯ ಸಹೋದರ ಬೆನ್ ನಗುತ್ತಾನೆ. 'ಹೆಂಗಸು ಡಾಕ್ಟರ್! ಕತೆಯ ಲಿಟಲ್ ನೆಲ್‌ಗಿಂತ ಬೇಗ ನಿನ್ನ ಪೇಷಂಟ್ಸ್ ಸತ್ತು ಹೋದರೆ ನನಗೆ ಆಶ್ಚರ್ಯವಾಗುವುದಿಲ್ಲ' ಆತ ಪರಿಹಾಸ್ಯ ಮಾಡಿ ನಕ್ಕಾಗ ತಾಯಿ ಬಯ್ಯುತ್ತಾಳೆ. 'ಕೋನಿ ನಿರ್ಧರಿಸಿದರೆ ಖಂಡಿತವಾಗಿಯೂ ಆಕೆ ಒಬ್ಬ ಉತ್ತಮ ಡಾಕ್ಟರ್ ಆಗುತ್ತಾಳೆ. ನನ್ನ ತಂದೆಯ ತಾಯಿ ಸಿವಿಲ್ ವಾರ್‌ಗಿಂತ ಮುಂಚೆಯೇ ಡಾಕ್ಟರ್ ಆಗಿದ್ದವಳೇ. 'ಆಕೆ ಮೆಡಿಕಲ್ ಸ್ಕೂಲಿಗೆ ಹೋಗಿದ್ದಳೇ?' ಎಂದು ಕೋನಿ ಕೇಳಿದಾಗ ಕುತೂಹಲದಿಂದ ಕಲಿತದ್ದೇ ಹೆಚ್ಚು ಎಂದು ತಾಯಿ ನುಡಿಯುತ್ತಾಳೆ. ಕೋನಿ ತಕ್ಷಣ ತಾನು ಮೆಡಿಕಲ್ ಸ್ಕೂಲಿಗೆ ಹೋಗುವುದಾಗಿ ನುಡಿಯುತ್ತಾಳೆ. ಹಳ್ಳಿಯಲ್ಲಿ ಬದುಕುವ ತಮಗೆ ಸ್ಕೂಲಿಗೆ ಹೋಗುವ ಸಾಧ್ಯತೆ ಕಡಿಮೆ ಎಂದು ಹೇಳುವ ತಾಯಿ ಬೇರೆಯವರಿಗಿಂತ ನೀನು ಹೆಚ್ಚು ಕಲಿಯಬೇಕು ಎನ್ನುತ್ತಾಳೆ. ಹೀಗೆ ಕಲಿಯುವ ಸಂಗತಿಗಳು ಓದುವ, ಬರೆಯುವಷ್ಟೇ ಮಹತ್ವವಾದದ್ದು ಎಂದೂ ಕೂಡಾ ತಾಯಿ ಹೇಳುತ್ತಾಳೆ.

ಹೀಗೆ ಎಂಟು ವರುಷದ ಪುಟ್ಟ ಮಗು ಕೋನಿ ಡಾಕ್ಟರ್ ಆಗುವ ಹಂಬಲವನ್ನು ಹೊತ್ತು ಹಳ್ಳಿಯೊಂದರಲ್ಲಿ ಅವರಿವರಿಂದ ಪುಟ್ಟ ಪುಟ್ಟ ಕಾಯಿಲೆಗಳಿಗೆ ಔಷಧಿ ಮಾಡುವುದನ್ನು, ಕಾಯಿಲೆಯವರನ್ನು ಸತ್ಕರಿಸುವುದನ್ನು ಕಲಿಯುತ್ತಾ ಹೋಗುತ್ತಾಳೆ.

ಒಂದು ದಿನ ಈಕೆ ತನ್ನ ಇಬ್ಬರು ಸಹೋದರರೊಡನೆ ಸೌದೆಗೆಂದು ಹೋಗುತ್ತಾಳೆ. ಬೆನ್ ಹಾಗೂ ವಿವ್ ಸೌದೆ ಕಡಿಯುವ ಕೆಲಸ ಮಾಡುತ್ತಿರುತ್ತಾರೆ. ವಿವ್ ಸೌದೆ ಹಿಡಿದುಕೊಂಡರೆ, ಬೆನ್ ಅದನ್ನು ಕಡಿಯುತ್ತಾನೆ. ಕುಡುಗೋಲು ಸೌದೆಗೆ ಬೀಳುವ ಬದಲು ವಿವ್‌ನ ಬೆರಳಿಗೆ ಬಿದ್ದು, ಬೆರಳು ಕತ್ತರಿಸಿ, ಸ್ವಲ್ಪ ಚರ್ಮದಿಂದ ಮಾತ್ರ ಕೈಗೆ ಅಂಟಿಕೊಂಡಿರುತ್ತದೆ. ಕೋನಿ ಓಡಿ ಹೋಗಿ ತಾಯಿಯನ್ನು ಕರೆದು ತರುತ್ತಾಳೆ. ತಾಯಿಯ ಮುಖ ಬಿಳಿಚಿಕೊಂಡಿರುತ್ತದೆಯೇ ಹೊರತು, ಆಕೆ ಧೈರ್ಯಗೆಡುವುದಿಲ್ಲ. ಶುಭ್ರ ಬಟ್ಟೆ, ಬಿಸಿನೀರು ಹಾಗೂ ಔಷಧಿ ತರಿಸಿ ವಿವ್‌ನನ್ನು ಮಲಗಿಸುತ್ತಾಳೆ. ಅಳುತ್ತಿದ್ದ ಬೆನ್‌ಗೆ ಬಯ್ದು 'ನೀನೇನೂ ಬೇಕೆಂದು ಮಾಡಲಿಲ್ಲ ಸುಮ್ಮನಾಗು' ಎನ್ನುತ್ತಾರೆ. ಎರಡು ಕಡ್ಡಿ ತಾ ಎಂದಾಕ್ಷಣ ಅವನು ತರುವ ಕಡ್ಡಿಯನ್ನು ಬೆರಳಿನ ಆಕಡೆ-ಈಕಡೆ ಇಟ್ಟು, ಬಟ್ಟೆಯನ್ನು ಕಟ್ಟುತ್ತಾಳೆ. ಡಾಕ್ಟರ್ ಸಿಗುವ ತನಕ ಬೆರಳು ಹಾಗೆ ನೆಟ್ಟಗಿರಲಿ ಎಂದುಕೊಳ್ಳುತ್ತಾ ಡಾಕ್ಟರ್‌ತ್ತ ನಡೆಯುತ್ತಾಳೆ. 'ನಾನು ಬರುತ್ತೇನೆ' ಎಂದು ಕೋನಿ ತಾಯಿಯ ಹಿಂದೆ ಓಡುತ್ತಾಳೆ.

ಈ ಸಂದರ್ಭವನ್ನು ಕೋನಿ ಮರೆಯುವುದಿಲ್ಲ. ಡಾಕ್ಟರ್ ರಿಚ್‌ರ್ಡ್ಸನ್ ತಾಯಿ ಕೇಟಳನ್ನು ಪ್ರಶಂಸಿಸುತ್ತಾರೆ. 'ನೀನು ಒಳ್ಳೆಯ ಕೆಲಸ ಮಾಡಿದ್ದೀಯ, ನೀನು ಡಾಕ್ಟರ್‌ಷ್ಟೇ ಒಳ್ಳೆಯ ಔಷಧಿ ನೀಡಿದ್ದೀಯ' ಎನ್ನುತ್ತಾರೆ. ಬೆರಳಿನ ಬಗ್ಗೆ ಆತಂಕ ವ್ಯಕ್ತಪಡಿಸುವ ತಾಯಿಗೆ ಆಕೆ ಮಾಡಿರುವ ಕೆಲಸದಿಂದಾಗಿ ಬೆರಳನ್ನು ಉಳಿಸಬಹುದು, ಆದರೆ ಮೊದಲಿನ ಹಾಗೆ ನೆಟ್ಟಗಿರುವುದಿಲ್ಲ' ಎನ್ನುತ್ತಾರೆ.

ಡಾಕ್ಟರ್ ವಿವ್ ಬೆರಳಿಗೆ ಉಪಚರಿಸುವುದನ್ನು ಕೋನಿ ಕುತೂಹಲದಿಂದ ಗಮನಿಸುತ್ತಾಳೆ. ವಿವ್‌ನ ಬೆರಳು ಹೋಗಿ ಬಿಡುತ್ತಿತ್ತು. ಆದರೆ ಡಾಕ್ಟರ್ ರಿಚ್‌ರ್ಡ್ಸನ್ ಅದನ್ನು ಉಳಿಸಿದರು. ತಾನೂ ಒಂದು ದಿನ ಹಾಗೆಯೇ ಉಳಿಸಬಲ್ಲೆ ಎಂಬ ಆತ್ಮವಿಶ್ವಾಸ ಪುಟ್ಟ ಮಗು ಕೋನಿಯಲ್ಲಿ ಬೆಳೆಯುತ್ತಾ ಹೋಯಿತು.

ತಾಯಿ ಕೇಟ್‌ಗೆ ಬಂದೂಕು ಬಳಸುವುದಕ್ಕೆ ಬರುತ್ತಿತ್ತು. ಕುದುರೆಯ ಮೇಲೆ ಸವಾರಿ ಮಾಡುವುದಕ್ಕೆ ಬರುತ್ತಿತ್ತು. ಹಾಗಾಗಿ ಧೈರ್ಯ ಆಕೆಯ ವ್ಯಕ್ತಿತ್ವದ ಭಾಗವಾಗಿತ್ತು. ಒಂದು ದಿನ ನದಿಯ ಹತ್ತಿರ 'ಸಹಾಯ ಮಾಡಿ ನಾನು ನೀರಲ್ಲಿ ಮುಳುಗುತ್ತಿದ್ದೇನೆ' ಎಂಬ ಧ್ವನಿ ಕೇಳಿ ಬಂತು. ಕೇಟ್‌ಗೆ ಆ ಧ್ವನಿಯ ಪರಿಚಯವಿತ್ತು. ಜೇಕ್ ಜಾನ್ಸನ್ ಯಾವಾಗಲೂ ಕುಡಿದಿರುತ್ತಿದ್ದ ಮನುಷ್ಯ. ಮಕ್ಕಳೆಲ್ಲರನ್ನು ಎಬ್ಬಿಸಿಕೊಂಡು ನದಿಯ ಬಳಿ ಓಡುತ್ತಾಳೆ. ನೀರು ಜಾನ್ಸನ್‌ನ ಭುಜದವರೆಗೆ ಇತ್ತು. ಕಾಲುಗಳು ಕೆಸರು ಮಣ್ಣಲ್ಲಿ ಹೂತು ಹೋಗಿರಬೇಕು. ಅಥವಾ ಕುಡಿದಿದ್ದ ವಿಸ್ಕಿಯ ನಶೆಯಲ್ಲಿ ಈಚೆ ಬರಲು ಸಾಧ್ಯವಾಗದೇ ಆತ ಕೂಗುತ್ತಿದ್ದಿರಬೇಕು. ಮಗ ಲೂಯಿಸ್‌ಗೆ ಮರದ ರೆಂಬೆಯ ಕಡೆಯಿಂದ ಅವನನ್ನು ಹಿಡಿದು ಎಳೆ ಎನ್ನುತ್ತಾಳೆ. 'ಅವನು ಬದುಕಿಸಲು ಯೋಗ್ಯನಲ್ಲ" ಎಂದು ಮಗ ಹೇಳಿದಾಗ, ಕೇಟ್ ನುಡಿಯುತ್ತಾಳೆ, "ಯಾವನೇ ಮನುಷ್ಯ, ಬದುಕಲು ಯೋಗ್ಯ' ಎನ್ನುತ್ತಾಳೆ. ಅವನನ್ನು ಮನೆಗೆ ಕರೆದೊಯ್ದು ಉಪಚರಿಸುತ್ತಾರೆ.

ಹಲವಾರು ವರ್ಷ ಕಳೆದ ಮೇಲೆ ಡಾಕ್ಟರ್ ಕೋನಿ ಗ್ಯುಯಾನ್ ಬೆಲೇವ್ ಆಸ್ಪತ್ರೆಯಲ್ಲಿ ಡಾಕ್ಟರ್ ಆಗಿ ಕೆಲಸ ಮಾಡುವಾಗ ಅತ್ಯಂತ ಬಡ ಹಾಗೂ ಕೊಳಕು ಜನರ ಸೇವೆ ಮಾಡಬೇಕಾಗುತ್ತದೆ. ನ್ಯೂಯಾರ್ಕ್‌ನ ಈ ಜನರು ತಮ್ಮ ಆರೋಗ್ಯ ಕಳೆದುಕೊಂಡದ್ದೇ ಕುಡಿತದಿಂದಾಗಿ. ಅವರನ್ನು

ಉಪಚರಿಸುವಾಗ ಕೋನಿಗೆ ನೆನಪಾಗುತ್ತಿದ್ದದ್ದು ತಾಯಿಯ ನೆನಪು. ನದಿಯ ಪಕ್ಕ ನಿಂತ ತಾಯಿ ತಾನು ಹಿಡಿದಿದ್ದ ದೀಪವನ್ನು ಎತ್ತಿಹಿಡಿದು ಹೇಳಿದ್ದಳು, 'ಲೂಯಿಸ್ ಯಾವುದೇ ಮನುಷ್ಯ ಬದುಕಲು ಯೋಗ್ಯ'.

ಹತ್ತು ವರುಷದ ಕೋನಿ ಅಣ್ಣ ಲೂಯಿಸ್ ಹಾಗೂ ಕೆಲಸಕ್ಕೆ ಸೇರಿದ ಅಕ್ಕ ಲಾರಾಳ ಸಹಾಯದಿಂದ ಚಾರ್ಲೇಟ್‌ನಲ್ಲಿ ಓದಲಿಕ್ಕೆಂದು ಬರುತ್ತಾಳೆ. ಆಕೆಗೆಂದೇ ಕೋಟ್ ಹಾಗೂ ಹ್ಯಾಟ್‌ನ್ನು ಮನೆಯವರೆಲ್ಲಾ ಸೇರಿ ಮಾಡುತ್ತಾರೆ. ಚಾರ್ಲೇಟ್‌ನಲ್ಲಿ ಅಕ್ಕನ ಚಿಕ್ಕ ಕೊಠಡಿಯಲ್ಲಿದ್ದು ಕೋನಿ ಸ್ಕೂಲಿಗೆ ಹೋಗಲು ಪ್ರಾರಂಭಿಸುತ್ತಾಳೆ. ಹತ್ತು ವರ್ಷದ ಹುಡುಗಿ ಮೊದಲನೇ ತರಗತಿಗೆ ಸೇರುವುದು ಕೋನಿಗೆ ಸಂತೋಷಕರ ವಿಚಾರವಾಗಿರಲಿಲ್ಲ. ಆಕೆ ಅಲ್ಲಿರುವವರಿಗಿಂತ ನಾಲ್ಕು ವರ್ಷ ದೊಡ್ಡವಳಾಗಿದ್ದಳು. ಹಳ್ಳಿಯ ಹ್ಯಾಟ್, ಕೋಟ್ ಧರಿಸಿದ್ದ ಕೋನಿಯನ್ನು ಎಲ್ಲಾ ಮಕ್ಕಳೂ ನೋಡಿ ನಕ್ಕರೂ ಕೋನಿ ತಲೆಗೆ ಹಚ್ಚಿಕೊಳ್ಳದೇ ಓದಲು ಪ್ರಾರಂಭಿಸುತ್ತಾಳೆ. ಆಟದ ಸಮಯದಲ್ಲಿ ಇಬ್ಬರು ಮಕ್ಕಳು ಆಕೆಯ ಬಣ್ಣ ಬಣ್ಣದ ಕೋಟು ಹಾಗೂ ಹೂವಿನ ರೀತಿಯ ಹ್ಯಾಟ್ ನೋಡಿ ನಕ್ಕಾಗ ಆಕೆಗೆ ಎಲ್ಲಿಲ್ಲದ ಕೋಪ. ಅವರಲ್ಲಿ ಒಬ್ಬನ ಮೇಲೆ ಹಾರಿ, ಅವನನ್ನು ಕೆಳಕ್ಕೆ ಬೀಳಿಸಿ, ಅವನನ್ನು ಹೊಡೆಯಲು ಪ್ರಾರಂಭಿಸುತ್ತಾಳೆ. ಶಿಕ್ಷಕಿಯೊಬ್ಬಳು ಹೊಡೆದಾಡುವುದು ತರವಲ್ಲ ಎಂದಾಗ ಇನ್ನೊಬ್ಬರ ಬಟ್ಟೆ ನೋಡಿ ನಗುವುದು ತರವಲ್ಲ. ನನ್ನ ಹತ್ತಿರ ಇರುವ ಬಟ್ಟೆ ಇದೇ, ನಾನು ಇದನ್ನೇ ಹಾಕಿಕೊಂಡು ಬರುತ್ತೇನೆ.

ಹೀಗೆ ತನ್ನನ್ನು ತಾನು ಆತ್ಮ ಸ್ಥೈರ್ಯದಿಂದ ಬೆಂಬಲಿಸಿ ಕೊಳ್ಳುತ್ತಾ ಬೆಳೆಯುವ ಕೋನಿ ಓದಿನಲ್ಲಿ ತನ್ನನ್ನು ತಾನು ತೊಡಗಿಸಿಕೊಳ್ಳುತ್ತಾ ಹೋಗುತ್ತಾಳೆ.

ಫಾರಂ 'ರಿವರ್ ಬ್ರಿಡ್ಜ್'ನಲ್ಲಿ ಬದುಕು ಕಷ್ಟವಾಗ ತೊಡಗಿದಾಗ ಗ್ಯುಯಾನ್ ಕುಟುಂಬ ಎಲ್ಲವನ್ನೂ ಮಾರಿ ಚಾರ್ಲೇಟ್‌ಗೆ ಬಂದು ನೆಲೆಸಿದಾಗ ಕೋನಿ ಮತ್ತೆ ಕುಟುಂಬದ ಜೊತೆಗಿದ್ದು ಓದನ್ನು ಮುಂದುವರಿಸುತ್ತಾಳೆ. ಅಕ್ಕ ಒಬ್ಬಳು ಡಾಕ್ಟರ್‌ನ್ನು ಮದುವೆಯಾಗಿ ದಕ್ಷಿಣ ಕ್ಯಾರೋಲೆನ್‌ಗೆ ತೆರಳಿದ ಮೇಲೆ, ಉಳಿದ ಅಕ್ಕ, ಅಣ್ಣಂದಿರು ಕೆಲಸಗಳ ಹಿಡಿದು ಕುಟುಂಬವನ್ನು ಸಾಕಲು ಹೋರಾಡುತ್ತಾರೆ. ಕೆಲವು ದಿನಗಳಲ್ಲಿ ತಂದೆಯ ಸಾವು ಇಡಿಯ ಕುಟುಂಬವನ್ನು ಅಲ್ಲಾಡಿಸಿದರೂ, ಹಿರಿಯ ಮಕ್ಕಳ ಹೊಣೆಗಾರಿಕೆಯಲ್ಲಿ ಕೋನಿ ತನ್ನ ವಿದ್ಯಾಭ್ಯಾಸವನ್ನು ಮುಂದುವರಿಸುತ್ತಾಳೆ.

ಅಕ್ಕನ ಗಂಡ ಡಾಕ್ಟರ್ ಬಾಬ್ ಕಾಕ್ ಕೋನಿಗೆ ಸೌತ್ ಕ್ಯಾರೋಲಿನ ನ ಸ್ಟೇಟ್ ಹಾಸ್ಪೆಟಲ್ ಪರಿಚಯಿಸುತ್ತಾನೆ. ಮಾನಸಿಕ ಚಿಕಿತ್ಸಾಲಯ ಕೇಂದ್ರ ಅದು. ಹೀಗೆ ಆಸ್ಪತ್ರೆ ಪರಿಚಯಿಸುವುದಲ್ಲದೇ ಔಷಧಿಗಳ ಅನೇಕ ಸಂಗತಿಗಳನ್ನು ಆತ ಆಕೆಗೆ ಕಲಿಸುತ್ತಾನೆ. ಈ ದೆಸೆಯಲ್ಲಿ ಅವನು ಅವಳಿಗೆ ಅಣ್ಣನಾಗಿ, ಗುರುವಾಗಿ, ತಂದೆಯಾಗಿ ಸ್ಪೂರ್ತಿಯಾಗುತ್ತಾನೆ. ಕೋನಿ ಆಗಾಗ್ಗೆ ಬಾಬ್ ಕಾಕ್‌ನ್ನು ಭೇಟಿಯಾಗುತ್ತಾಳೆ. ಹೀಗೆ ಭಾವನಿಂದ ಸ್ವಲ್ಪ ಔಷಧಿಗಳ ಪರಿಚಯ ಮಾಡಿಕೊಂಡ ಕೋನಿ ಕೆಟ್ಟ ಆಹಾರ ಸೇವನೆಯಿಂದ ಚಾರ್ಲೋಟ್‌ನಲ್ಲಿ ಕಾಯಿಲೆ ಹಬ್ಬಿದಾಗ ಹಲವಾರು ರೋಗಿಗಳನ್ನು ಶುಶ್ರೂಷೆ ಮಾಡುತ್ತಾಳೆ.

ನಂತರದ ದಿನಗಳಲ್ಲಿ ಆಕೆಯ ಅಕ್ಕ ಲಾರಾ ಆಕೆಯನ್ನು ಮಿಸ್ ಶಿಪ್ಸ್ ಸ್ಕೂಲಿಗೆ ಕಳುಹಿಸಲು ಪ್ರೇರೇಪಿಸುತ್ತಾಳೆ. ಆ ಸ್ಕೂಲಿನಲ್ಲಿ ಓದಿದರೆ ವೆಲ್ಲೆಸ್ಲಿಯಂತಹ ಅತ್ಯಂತ ಮುಖ್ಯ ಮಹಿಳಾ ಕಾಲೇಜಿಗೆ ಹೋಗಿ ಮೆಡಿಕಲ್ ಓದಬಹುದೆಂಬುದು ಆಕೆಯ ಆಸೆ. ಅಕ್ಕನ ಹಣದ ಆಸರೆಯಲ್ಲಿ ಕೋನಿ ಮಿಸ್ ಶಿಪ್ಸ್ ಸ್ಕೂಲಿನಲ್ಲಿ ತಾನು ಓದಬೇಕಾದ ಮೆಡಿಕಲ್ ಸೈನ್ಸ್‌ಗೆ ಬುನಾದಿಯನ್ನು ಹಾಕಿಕೊಳ್ಳುತ್ತಾಳೆ. ನಂತರದಲ್ಲಿ ವೆಲ್ಲೆಸ್ಲಿಗೆ ಹೋಗಲು ಇನ್ನೂ ಓದಬೇಕಾದ್ದರಿಂದ ನಾರ್ಥಫೀಲ್ಡ್ ಕಾಲೇಜಿಗೆ ಸೇರುತ್ತಾಳೆ. ಇದು ವೆಲ್ಲೆಸ್ಲಿ ಕಾಲೇಜಿನ ಹತ್ತಿರವೇ ಇದ್ದ ಸ್ಕೂಲು. ಈ ಸ್ಕೂಲ್ ಮುಗಿಸಿದ ಮೇಲೆ ವೆಲ್ಲೆಸ್ಲಿ ಕಾಲೇಜಿನಲ್ಲಿ ಕೋನಿ ಓದಬಹುದೆಂಬ ಆಶ್ವಾಸನೆ ಇದ್ದುದರಿಂದ ಅಲ್ಲಿ ಕಷ್ಟಪಟ್ಟು ಓದತೊಡಗುತ್ತಾಳೆ.

ಈ ಶಾಲೆಯಲ್ಲಿ ಅನೇಕ ರೀತಿಯ ಪರೀಕ್ಷೆಗಳನ್ನು ಕೋನಿ ಎದುರಿಸಬೇಕಿತ್ತು. ಆ ಸ್ಕೂಲಿನ ಅಧ್ಯಕ್ಷೆ ಮಿಸ್ ಹಾಲ್ ಕೋನಿಯನ್ನು ಒಮ್ಮೆ ಬರಲು ಹೇಳಿ ಕಳಿಸಿದರು. ಕೋನಿ ಅವರನ್ನು ಭೇಟಿಯಾದಾಗ ಆಕೆ ಎಲ್ಲಾ ಟೆಸ್ಟ್‌ಗಳಲ್ಲಿ ಫೇಲ್ ಆಗಿರುವುದಾಗಿಯೂ, ಹಾಗಾಗಿ ಬೇರೆ ಬೇರೆ ಪುಸ್ತಕಗಳನ್ನು ಓದಬೇಕಾಗುತ್ತದೆ ಎಂದು ಒಂದು ಪಟ್ಟಿಯನ್ನೇ ನೀಡಿದರು. ಕೋನಿ ಆ ಪುಸ್ತಕಗಳನ್ನು ತಾನು ಓದ್ದಿರುವುದಾಗಿ ಹೇಳಿ ತನ್ನಲ್ಲಿರುವ ಒಂದು ಪಟ್ಟಿಯನ್ನು ನೀಡುತ್ತಾಳೆ. ವೆಲ್ಲೆಸ್ಲಿ ಮಹಿಳಾ ಕಾಲೇಜಿಗೆ ಪ್ರವೇಶ ಪಡೆಯಲು ತಾನು ತನ್ನ ಯೋಜನೆಯ ಪ್ರಕಾರವೇ ಓದುತ್ತೇನೆ ಎಂದು ಅಧ್ಯಕ್ಷೆಯ ಹತ್ತಿರ ನುಡಿಯುತ್ತಾಳೆ. ಆ ಅಧ್ಯಕ್ಷೆ ಕ್ಷಣಕಾಲ ಕಣ್ಣು ಮುಚ್ಚಿ ಯೋಚಿಸಿ 'ನೀನು ನಿನ್ನ ಯೋಜನೆಯ ಪ್ರಕಾರ ಆರು ವಾರಗಳ ಕಾಲ ಓದು, ಆದರೆ ನೀನು ನಿನ್ನ ಗುರಿಯನ್ನು ಸಾಧಿಸಿ ತೋರಿಸದಿದ್ದರೆ, ನಂತರ ನನ್ನ ಯೋಜನೆಯ ಪ್ರಕಾರ ನೀನು ಅಧ್ಯಯನ ಮಾಡಬೇಕಾಗುತ್ತದೆ.'

ಆರು ವಾರಗಳ ಕಾಲ ತಿನ್ನುವುದು, ಓದುವುದು ಬಿಟ್ಟರೆ ಕೋನಿ ಇನ್ನೇನನ್ನೂ ಮಾಡುತ್ತಿರಲಿಲ್ಲ. ಸೂರ್ಯ ಉದಯಿಸುವ

ಮೊದಲೇ ಎದ್ದು ಓದಲು ಪ್ರಾರಂಭಿಸುತ್ತಿದ್ದಳು. ಆರು ವಾರಗಳ ನಂತರ ಮಿಸ್ ಹಾಲ್ ಆಕೆಯ ಶ್ರಮ ಹಾಗೂ ಬುದ್ಧಿಶಕ್ತಿಯ ಬಗ್ಗೆ ಪ್ರಶಂಸೆ ಮಾಡಿದರು. ಇದು ಬರಿಯ ನಿನ್ನ ಬುದ್ಧಿವಂತಿಕೆಯ ಶಕ್ತಿಯಲ್ಲ ನಿನಗೆ ನೀನು ಓದಬೇಕೆಂಬುದನ್ನು, ತೀರ್ಮಾನಿಸಿ ಕೊಂಡದ್ದನ್ನು ಮಾಡಲೇಬೇಕೆಂದು ಇಚ್ಛಾಶಕ್ತಿ ಇದೆ. ಹಾಗಾಗಿ ನೀನು ಯೋಜಿಸಿದ ಪ್ರಕಾರವೇ ನೀನು ಓದು ಎಂದು ಆಕೆಯನ್ನು ಹುರಿದುಂಬಿಸುತ್ತಾರೆ.

ನಾರ್ಥಫೀಲ್ಡ್‌ನಲ್ಲಿ ಓದುವಾಗಲೇ ಕೋನಿ ವೆಲ್ಲೆಸ್ಲಿ ಕಾಲೇಜಿಗೆ ಪ್ರವೇಶಕ್ಕಾಗಿ ಪರೀಕ್ಷೆಯನ್ನು ಬರೆಯುತ್ತಾಳೆ.

ನಾರ್ತ್‌ಫೀಲ್ಡ್‌ನಲ್ಲಿ ವಿದ್ಯಾಭ್ಯಾಸ ಮುಗಿಸಿ ಹೊರ ಬರುವಾಗ ಕೋನಿಗೆ ವೆಲ್ಲೆಸ್ಲಿಯಲ್ಲಿ ಓದಲು 100 ಡಾಲರ್ ಸ್ಕಾಲರ್‌ಶಿಪ್ ನಾರ್ತಫೀಲ್ಡ್‌ನಿಂದ ದೊರಕುತ್ತದೆ. ಎರಡೇ ಎರಡು ಉಡುಪುಗಳನ್ನು ಇಟ್ಟುಕೊಂಡು ವೆಲ್ಲೆಸ್ಲಿ ಕಾಲೇಜನ್ನು ಪ್ರವೇಶಿಸಿದ ಮೊದಲ ಮಹಿಳೆ ಕೋನಿ ಗ್ಯುಯಾನ್. ಬಟ್ಟೆಗಳು ಕೋನಿಗೆ ಯಾವತ್ತು ಅಷ್ಟು ಮುಖ್ಯ ಅನ್ನಿಸಿರಲಿಲ್ಲ. ಮೆಡಿಸನ್ ಓದುವುದು, ಡಾಕ್ಟರ್ ಆಗುವ ಕಡೆ ಮಾತ್ರ ಆಕೆಯ ಗಮನವಿತ್ತು. ನಾರ್ತ್‌ಫೀಲ್ಡ್‌ನಿಂದ 100 ಡಾಲರ್ ಸ್ಕಾಲರ್‌ಶಿಪ್ ಪಡೆಯುತ್ತಿದ್ದ ಕೋನಿ ಸೆಲ್ಫ್-ಹೆಲ್ಪ ಗರ್ಲ್ಸ್‌ನ ಕಟ್ಟಡದಲ್ಲಿ ಕೆಲಸ ಮಾಡಿ 200 ಡಾಲರ್ ಗಳಿಸುತ್ತಿದ್ದಳು. ಆಕೆಯ ಅಕ್ಕ ಲಾರಾ ಆಕೆಗೆ 100 ಡಾಲರು ಕಳಿಸುತ್ತಿದ್ದಳು. ಹೀಗೆ ವೆಲ್ಲೆಸ್ಲಿಯಲ್ಲಿ ತಿಂಗಳಿಗೆ ಬೇಕಾಗುತ್ತಿದ್ದ 400 ಡಾಲರ್‌ಗಳನ್ನು ಕೋನಿ ಹೊಂದಿಸಿ ಕೊಳ್ಳುತ್ತಿದ್ದಳು.

ಡಾಕ್ಟರ್ ಆಗುವ ಹಂಬಲದಿಂದ ಹಗಲಿರುಳೂ ಓದುತ್ತಿದ್ದ ಕೋನಿ ವೆಲ್ಲೆಸ್ಲಿ ಕಾಲೇಜಿನಲ್ಲಿರುವಾಗ ಕಣ್ಣುಗಳ ತೊಂದರೆಯನ್ನು ಅನುಭವಿಸತೊಡಗಿದಳು. ಆಕೆಗೆ ಕನ್ನಡಕ ಹಾಕುವಂತೆ ಹೇಳಲಾಯಿತು. ಆದರೆ ಹಣ ಹೆಚ್ಚು ಬೇಕಾಗಬಹುದೆಂದು ಆಕೆ ಹೆದರಿದಾಗ ಬೋಸ್ಟನ್ ಕ್ಲಿನಿಕ್‌ನಲ್ಲಿ ಉಚಿತವಾಗಿ ಕನ್ನಡಕ ನೀಡಲಾಗುತ್ತದೆಯೆಂದು ಆಕೆಯನ್ನು ಕಳುಹಿಸಲಾಗುತ್ತದೆ. ಬೋಸ್ಟನ್‌ಗೆ ಹೋಗುವ ಕೋನಿಗೆ ಅಲ್ಲಿ ಬಹಳ ಕೆಟ್ಟ ಅನುಭವವಾಗುತ್ತದೆ. ಕೈಯಲ್ಲಿ ಲೆನ್ಸ್ ಹಿಡಿದುಕೊಂಡ ಡಾಕ್ಟರ್ 'ಆ ಕಣ್ಣು ಸರಿಯಾಗಿ ಕಾಣಿಸುತ್ತದೆಯೇ ಅಥವಾ ಈ ಕಣ್ಣು ಸರಿಯಾಗಿ ಕಾಣಿಸುತ್ತಿದೆಯೇ' ಎಂದು ಕೇಳಿ ಉತ್ತರ ನಿರೀಕ್ಷಿಸುತ್ತಾನೆ. ಕೋನಿ ನಿರ್ಧರಿಸಲು ತನಗೆ ಸ್ವಲ್ಪ ಸಮಯಬೇಕು. ತಕ್ಷಣ ನಿರ್ಧರಿಸಲಾರೆ ಎನ್ನುವಷ್ಟರಲ್ಲಿ ಚೀಟಿ ಬರೆದು ಆಕೆಯ ಕೈಯಲ್ಲಿಟ್ಟು ಮುಂದಿನ ರೋಗಿಯನ್ನು ಪರೀಕ್ಷಿಸಲು ಆತ ಮುಂದಾಗುತ್ತಾನೆ. ಕೋನಿಗೆ ತಾನೊಂದು ಬೇಡದ ವಸ್ತು ಎನ್ನುವ ಭಾವನೆ ಬರುತ್ತದೆ. ಕನ್ನಡಕ ತೆಗೆದುಕೊಳ್ಳುವ ಬದಲು ಆಸ್ಪತ್ರೆಯ ಮುಖ್ಯಸ್ಥನ ಹತ್ತಿರ ಹೋಗಿ "ನಾನು ನಿಮ್ಮ ಕಣ್ಣಿನ ಆಸ್ಪತ್ರೆಗೆ ಹೋಗಿದ್ದೆ. ನಾರ್ತ್ ಕಾರೋಲಿನದಲ್ಲಿ ನಾವು ನಮ್ಮ ಹಸು, ನಾಯಿಗಳಿಗೆ ಇಲ್ಲಿ ನಿಮ್ಮ ರೋಗಿಗಳನ್ನು ನೀವು ನೋಡಿಕೊಳ್ಳುವುದಕ್ಕಿಂತ ಚೆನ್ನಾಗಿ ನೋಡಿಕೊಳ್ಳುತ್ತೇವೆ. ನಿಮ್ಮ ಕಣ್ಣಿನ ಡಾಕ್ಟರ್ ನನ್ನ ಯಾವ ಕಣ್ಣಿಗೆ ಸಮಸ್ಯೆಯಿದೆ ಎಂದು ತಿಳಿದುಕೊಳ್ಳುವ ಅಗತ್ಯವೂ ಇಲ್ಲದೇ ಕನ್ನಡಕ ನೀಡಿದ್ದಾನೆ?"

ಮುಖ್ಯ ಡಾಕ್ಟರ್ ಆಕೆಗೆ ಸಮಾಧಾನ ಮಾಡಿದಾಗಲೂ ಆಕೆಗೆ ಸಮಾಧಾನವಾಗುವುದಿಲ್ಲ. ಕನ್ನಡಕ ತೆಗೆದುಕೊಳ್ಳದೇ ತನ್ನಷ್ಟಕ್ಕೆ ತಾನೇ ಗೊಣಗಿಕೊಳ್ಳುತ್ತಾ ರೈಲಿನಲ್ಲಿ ವೆಲ್ಲೆಸ್ಲಿಗೆ ವಾಪಸ್ಸು ಬರುತ್ತಾಳೆ. ರೈಲಿನುದ್ದಕ್ಕೂ ಆಕೆಯ ಶಬ್ದಗಳು ಆಕೆಗೇ ಕೇಳಿಸುತ್ತಿದ್ದವು. ಕ್ಲಿನಿಕ್ಸ್ ಬಗ್ಗೆ ಏನಾದರೂ ಮಾಡಬೇಕು. ಈ ಒಂದು ಘಟನೆಯಿಂದಾಗಿ ಕೋನಿ ಗ್ಯುಯಾನ್‌ಳ ಬದುಕು ಹೊಸ ದಿಕ್ಕಿನತ್ತ ಹರಿಯತೊಡಗಿತು.

ವರ್ಷ ಕಳೆಯುವುದರಲ್ಲಿಯೇ ವೆಲ್ಲೆಸ್ಲಿಯಲ್ಲಿ ವಿದ್ಯಾಭ್ಯಾಸ ಮುಗಿಸಲು ಕೋನಿಗೆ ಆ ಕಾಲೇಜು ಪ್ರಾರಂಭಿಸಿದ ಡ್ಯುರೆಂಟ್ ಎಂಬ ವ್ಯಕ್ತಿಯ ಹೆಸರಿನ ಸ್ಕಾಲರ್‌ಶಿಪ್ ದೊರಕಿದ್ದರಿಂದ ಆಕೆಗೂ ಹಾಗೂ ಆಕೆಯ ಕುಟುಂಬಕ್ಕೂ ಅತ್ಯಂತ ಆನಂದವಾಗುತ್ತದೆ. ಈ ಸ್ಕಾಲರ್‌ಶಿಪ್ ಆಕೆಯ ವಿದ್ಯಾಭ್ಯಾಸದ ಇಡಿಯ ಖರ್ಚನ್ನು ತೂಗಿಸುತ್ತಿತ್ತು. ಈ ಡ್ಯೂರೆಂಟ್ ಸ್ಕಾಲರ್‌ಶಿಪ್ ಪಡೆಯುವುದು ಅತ್ಯಂತ ಗೌರವಾನ್ವಿತವಾದ ವಿಚಾರವಾಗಿತ್ತು. ಅತ್ಯಂತ ಪ್ರತಿಭಾವಂತರನ್ನು ಮಾತ್ರ ಇದಕ್ಕಾಗಿ ಆಯ್ಕೆ ಮಾಡಿಕೊಳ್ಳ ಲಾಗುತ್ತಿತ್ತು. ಮೂರನೆಯ ವರ್ಷದಲ್ಲಿ ವೆಲ್ಲೆಸ್ಲಿಯಲ್ಲಿ ಓದುವಾಗ 400 ಡಾಲರ್‌ಗಳ ಫೀಸ್ ಸ್ಕಾಲರ್‌ಶಿಪ್ ಕೂಡಾ ಆಕೆಗೆ ದೊರಕಿತು. ಈ ಎರಡೂ ಸ್ಕಾಲರ್‌ಶಿಪ್‌ಗಳು ಆಕೆಯು ಕಷ್ಟಪಟ್ಟು ವೆಲ್ಲೆಸ್ಲಿಯಲ್ಲಿ ಉತ್ತಮ, ಪ್ರತಿಭಾವಂತ ವಿದ್ಯಾರ್ಥಿನಿ ಯಾದುದನ್ನು ಗುರುತಿಸುತ್ತವೆ.

ಡಾಕ್ಟರ್ ಆಗುವ ಹಂಬಲಕ್ಕಾಗಿ ಕೋನಿ ಮದುವೆಯನ್ನೇ ಆಗುವುದಿಲ್ಲ. ಹೀಗೆ ಚಿಕ್ಕ ಕುಟುಂಬವೊಂದರಲ್ಲಿ, ಹಳ್ಳಿಗಾಡು ಪರಿಸರದಲ್ಲಿ ಹುಟ್ಟಿ ಬೆಳೆದ ಕೋನಿ ಗ್ಯುಯಾನ್ ದೊಡ್ಡ ಡಾಕ್ಟರ್ ಆಗುತ್ತಾಳೆ. ಈಗ ನ್ಯೂಯಾರ್ಕ್ ಆಸ್ಪತ್ರೆಯಲ್ಲಿ ಡಾಕ್ಟರ್ ಕೋನಿ ಗ್ಯುಯಾನ್ ಕಟ್ಟಡವಿದ್ದು, ಇದರಲ್ಲಿ 80 ಕ್ಲಿನಿಕ್‌ಗಳಿರುವುದು ಅಮೆರಿಕ ಸರ್ಕಾರ ಆಕೆಯ ಸಾಧನೆಗೆ ನೀಡಿರುವ ಕೊಡುಗೆಯಾಗಿದೆ.

○ *ಎಚ್. ಎಸ್. ಚಂಪಾವತಿ*

# ಯಡವನಹಳ್ಳಿ ಜಾತ್ರೆ - ಸಂತ್ರಸ್ತರು

○ ಮೀರಾ ನಾಯಕ, ಮೈಸೂರು

ಮಂಡ್ಯ ಜಿಲ್ಲೆಯ ಮದ್ದೂರಿನ ಕೊಪ್ಪ ವ್ಯಾಪ್ತಿಯ ಯಡವನಹಳ್ಳಿ ಗ್ರಾಮದಲ್ಲಿ ಕೊಂಡದ ಬೀರೇಶ್ವರ ಜಾತ್ರೆ 27ನೇ ಮಾರ್ಚ್ 2000 ದಂದು ಸಂಜೆ 5 ಗಂಟೆಗೆ ಪ್ರಾರಂಭವಾಯಿತು. ಕೆಲವು ವರ್ಷಗಳಿಂದ ಸ್ಥಗಿತಗೊಂಡ ಜಾತ್ರೆ ವಿಜೃಂಭಣೆಯಿಂದ ಪ್ರಾರಂಭವಾದ ಕೆಲವೇ ಗಂಟೆಗಳಲ್ಲಿ ಆಡಳಿತ ಪಕ್ಷದ ಕೈಗೊಂಬೆಯಾಗಿ ಅಲ್ಲಿನ ಅಧಿಕಾರ ವರ್ಗ ವರ್ತಿಸಿದ ಕಾರಣ ಪೊಲೀಸರ ಲಾಠಿಪ್ರಹಾರ ಅಶ್ರುವಾಯು ಸಿಡಿತಗಳು ಪ್ರಾರಂಭವಾದವು. ನೋಡು ನೋಡುತ್ತಿದ್ದಂತೆ ವಿಜೃಂಭಣೆಯ ಜಾತ್ರಾಸ್ಥಳ ಸ್ಮಶಾನ ಸದೃಶ್ಯವಾಯಿತೆಂದು ಜಾತ್ಯಾತೀತ ಜನತಾದಳ ಮತ್ತು ರೈತ ಸಂಘಟನೆಯವರು ಪತ್ರಿಕೆಗಳಲ್ಲಿ ದೂರಿರುವರು.

ಸಾಕಷ್ಟು ಆದಾಯವಿದ್ದ ದೇವಸ್ಥಾನದ ಪೂಜೆಗಾಗಿ ಒಂದೇ ಮನೆತನಕ್ಕೆ ಸೇರಿದ್ದ ಸಿದ್ದರಾಮು ಮತ್ತು ಪುಟ್ಟರಾಮು ಎಂಬವರಲ್ಲಿ ಹಲವು ವರ್ಷಗಳಿಂದ ವೈಮನಸಿತ್ತು. ಜಗಳ ನಡೆದು ಸೋಮವಾರದ ಪೂಜೆಯನ್ನೂ ಕೂಡ ನ್ಯಾಯಾಲಯದಲ್ಲಿ ಬಗೆಹರಿಸಿ ಹಂಚಿಕೊಂಡಿದ್ದರು. ಆ ಕಾರಣದಿಂದ ಕೆಲವು ವರ್ಷಗಳಿಂದ ಜಾತ್ರೆ ನಿಂತುಹೋಗಿತ್ತು. ಪೂಜಾರಿಗಳಲ್ಲೊಬ್ಬ ಬೆಂಗಳೂರಿನಲ್ಲೇ ಹೆಚ್ಚು ಸಮಯ ಕಳೆಯುತ್ತಿದ್ದು ಆತ ಒಂದು ಟ್ರಸ್ಟ ಮಾಡಿಕೊಂಡಿದ್ದ. ಅಲ್ಲದೆ ಅವನಿಗೆ ರಾಜಕೀಯ ಬೆಂಬಲವಿತ್ತು ಎಂಬುದು ಘಟನೆ ನಡೆದಾಗ ಎಲ್ಲ ಪತ್ರಿಕೆಗಳು ರಾಜಾರೋಷವಾಗಿ ಬರೆದಿವೆ. ಅಷ್ಟೇ ಅಲ್ಲ ರಾಜಕೀಯ ಮುಖಂಡರುಗಳು ಕೂಡ ತಮ್ಮ ಹೇಳಿಕೆಯಲ್ಲಿ ಉದ್ಧರಿಸಿರುವರು. ಹೀಗಾಗಿ ಇನ್ನೊಬ್ಬ ಪೂಜಾರಿ ಊರಿನವರಿಗೆ ಹತ್ತಿರವಾಗಿ ಊರನಲ್ಲೇ ಉಳಿದಿದ್ದ ಎಂಬುದು ತಿಳಿದುಬಂದಿದೆ. ಕಳೆದ ಮೂರು ವರ್ಷಗಳಿಂದಲೂ ಗ್ರಾಮದ ಕೊಂಡದ ಬೀರೇಶ್ವರ ದೇವಸ್ಥಾನದ ಟ್ರಸ್ಟನ ಪದಾಧಿಕಾರಿಗಳು ಮತ್ತು ಅನಾದಿಕಾಲದಿಂದ ಪೂಜೆ ಸಲ್ಲಿಸುತ್ತಿದ್ದ ಗುಂಪಿನ ನಡುವೆ ಭಿನ್ನಾಭಿಪ್ರಾಯ ತಲೆದೋರಿ ಈ ಪ್ರಕರಣ ತೀರ್ಮಾನಕ್ಕಾಗಿ ರಾಜ್ಯದ ಉಚ್ಛ ನ್ಯಾಯಾಲಯ ದಲ್ಲಿತ್ತು. ಈಚೆಗೆ ತೀರ್ಮಾನ ನೀಡಿರುವ ನ್ಯಾಯಾಲಯವು ಕಂದಾಯ ಹಾಗೂ ಪೊಲೀಸ್ ಅಧಿಕಾರಿಗಳ ಸಮಕ್ಷಮದಲ್ಲಿ ಜಾತ್ರೆ ನಡೆಸುವಂತೆ ಆದೇಶ ನೀಡಲಾಗಿತ್ತು. ಈ ಸಂಬಂಧ ಜಾತ್ರೆಗೆ ಮೂರು ದಿನ ಮುನ್ನ ಅಧಿಕಾರಿಗಳ ಸಮ್ಮುಖದಲ್ಲಿ ನಡೆದ ಸಂಧಾನ ಸಭೆಯಲ್ಲಿ ಎರಡೂ ಗುಂಪು ಜಾತ್ರೆ ನಡೆಸಲು ಒಪ್ಪಿತ್ತು ಎಂದು ಕೆಲವರು ಹೇಳಿದರೆ, ಇನ್ನೂ ಕೆಲವರು ಅಧಿಕಾರ ರೂಢ ಸರ್ಕಾರದ ಬೆಂಬಲವಿದ್ದ ಟ್ರಸ್ಟ ಪೂಜಾರಿ ಕಡೆಯವರು ಗುಟ್ಟಾಗಿ ತೀರ್ಮಾನಿಸಿ ಅಧಿಕಾರಿಗಳಿಂದ ಜಾತ್ರೆಯ ವಿಷಯ ಇನ್ನೊಂದು ಗುಂಪಿನ ಮೇಲೆ ಹೇರಲಾಗಿತ್ತು ಎಂಬ ವದಂತಿಯೂ ಇದೆ.

ಕಲ್ಲು ತೂರಾಟ, ಖಾರದಪುಡಿ ಎರಚುವಿಕೆಯಿಂದ ಪೊಲೀಸರು ಲಾಠಿ ಚಾರ್ಜ್ ಅಶ್ರುವಾಯು ಸಿಡಿತ ಮತ್ತು ಅನಂತರದ ದಿನಗಳಲ್ಲಿ ಕೆಲವರ ಮನೆಗಳಿಗೆ ಪೊಲೀಸರು ನುಗ್ಗಿ ಲೂಟಿಕಾರರಂತೆ ಧಾನ್ಯ ಸಂಗ್ರಹಣೆಯ ಗುಡಾಣಗಳನ್ನು ಒಡೆದು ಹಾಕಿದ್ದಾರಲ್ಲದೆ, ದವಸ ಧಾನ್ಯಗಳನ್ನು ಉಪಯೋಗಿಸದಂತೆ ಅದಕ್ಕೆ ಸೀಮೆಎಣ್ಣೆ ಡಬ್ಬ, ಬಲ್ಬುಗಳನ್ನು ಒಡೆದು ಸೇರಿಸಿದ್ದಾರೆ. ಅನೇಕ ವಿಧದಲ್ಲಿ ಹಿಂಸಿಸಿದ ಪೊಲೀಸರು ಪುರುಷ ಮಹಿಳೆ ಎಂಬುದನ್ನೂ ಗಣನೆಗೆ ತೆಗೆದುಕೊಂಡಿಲ್ಲ. ಲಿಂಗರಾಜು ಮತ್ತು ರವಿ ಎಂಬ ಕಾನ್ಸ್ಟೇಬಲ್‌ಗಳು ದುಂಡಾವರ್ತಿ ನಡೆಸಿದರು ಎಂದು ಅವರ ಹೆಸರನ್ನೂ ಹೇಳುತ್ತಾರೆ. ನ್ಯಾಯಾಲಯದ ಆದೇಶದಂತೆ ಪ್ರಾರಂಭಗೊಂಡ ಜಾತ್ರೆಯ ಸಂದರ್ಭದಲ್ಲಿ ನಡೆದ ಸಂಘರ್ಷದಲ್ಲಿ ಪೊಲೀಸರು ಮತ್ತು ಕಂದಾಯ ಇಲಾಖೆ ಅಧಿಕಾರಿಗಳು ಕಾಂಗ್ರೆಸ್ ಪಕ್ಷದ ವಕ್ತಾರರಂತೆ ವರ್ತಿಸಿದ್ದಾರೆ ಎಂದು ಪತ್ರಿಕೆಯಲ್ಲಿ ರೈತ ಸಂಘದ ಸಂಚಾಲಕ ವಿ. ಅಶೋಕ ಆರೋಪಿಸಿದ್ದಾರೆ.

ಗ್ರಾಮ ಪಂಚಾಯಿತಿ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಚುನಾವಣೆಯಲ್ಲಿ ಸೋತ ಪಕ್ಷದವರೇ ಜಾತ್ರೆ ನಡೆಯುವಂತೆ ಮಾಡಿ, ಜಾತ್ರೆಯಲ್ಲಿ ಕಲ್ಲು ತೂರಿ ಗಲಾಟೆ ಎಬ್ಬಿಸಿ ಅಂದಿನ ದೌರ್ಜನ್ಯಕ್ಕೆ ಕಾರಣ ಎಂಬುದು ಕೆಲವರ ಅಭಿಪ್ರಾಯ. ಅಲ್ಲಿ ಗಾಯಗೊಂಡವರನ್ನು ಮತ್ತು ತೊಂದರೆಪಟ್ಟವರನ್ನು ಕಂಡಾಗ ಪತ್ರಿಕಾ ಹೇಳಿಕೆಗಳು ಸತ್ಯ ದೂರವಾದವು ಅಲ್ಲ ಎಂದೆನಿಸುವುದು. ಕೌಡ್ಲೆ ಗ್ರಾಮ ಪಂಚಾಯಿತಿ ಅಧ್ಯಕ್ಷೆ ಪುಟ್ಟಚೆನ್ನಮ್ಮ ಅವರ ಮೇಲೆ ಹಲ್ಲೆಯಾಗಿದೆ. 80 ವರ್ಷದ ವಯೋವೃದ್ಧ ಬಿ. ಎ. ಮಂಗೇಗೌಡರು ಮಂಡ್ಯ ಜಿಲ್ಲಾ ಆಸ್ಪತ್ರೆ ಸೇರಿದ್ದರು. ಪಾರ್ವತಮ್ಮ, ಶಂಕರ, ಮಾದಯ್ಯ ಕೊಪ್ಪ ಆಸ್ಪತ್ರೆ ಸೇರಿದ್ದರು. ಪುಟ್ಟಚೆನ್ನಮ್ಮ, ಚಿಕ್ಕಮ್ಮ ಮರಿಯಮ್ಮ ಇವರನ್ನು ಪೊಲೀಸ್ ಠಾಣೆಯಲ್ಲಿ ಕೂಡಿಹಾಕಿ ಅಮಾನವೀಯವಾಗಿ ಹೊಡೆದು ಬಡಿದು ಮಾಡಿದ್ದಾರೆ. ಈ ಮೂವರನ್ನು ಮೂರು ದಿನಗಳಿಂದ ಗೌಪ್ಯವಾಗಿ ಇಟ್ಟಿದ್ದರು. 80 ವರ್ಷದ ವಯೋವೃದ್ಧೆ ನಂಜಮ್ಮ,

ಹೊಂಬಮ್ಮ, ಪಾಪಣ್ಣ, ಭದ್ರಯ್ಯನ ತಂಗಿ ತುಂಬು ಗರ್ಭಿಣಿ ಸಾಕಮ್ಮನ ಮೇಲೂ ಅಮಾನುಷವಾಗಿ ಹಲ್ಲೆ ನಡೆಸಿದ ವರದಿ ಪತ್ರಿಕೆಯಲ್ಲಿ ಬಂದಿದೆ. ಎಸ್.ಎಸ್.ಎಲ್.ಸಿ. ಪರೀಕ್ಷೆಗಾಗಿ ಓದುತ್ತಿದ್ದ ವಿದ್ಯಾರ್ಥಿನಿಯ ಮೇಲೆ ಅತ್ಯಾಚಾರದ ಪ್ರಯತ್ನ ನಡೆಯಿತು ಎಂಬುದು ಆ ಹಳ್ಳಿಗರು ನೀಡಿದ ವಿವರಣೆ.

ಏಪ್ರಿಲ್ 1ರ 'ಉದಯಕಾಲ' ಮಂಡ್ಯದ ದಿನ ಪತ್ರಿಕೆ 'ಯಡವನಹಳ್ಳಿಯ ಬೀರೇಶ್ವರ ಮತ್ತು ಸಿದ್ದೇಶ್ವರ ಟ್ರಸ್ಟಿನ ಅಧ್ಯಕ್ಷ ಪುಟ್ಟಸ್ವಾಮಿಗೆ ರಾಜ್ಯ ಉಚ್ಚ ನ್ಯಾಯಾಲಯವು 20 ಸಾವಿರ ರೂ.ಗಳ ಜುಲ್ಮಾನೆ ವಿಧಿಸಿದೆ' ಎಂದು ವರದಿ ಮಾಡಿದೆ. ಇದರಿಂದಲೇ ಈ ಪ್ರಕರಣದ ಸತ್ಯಾಸತ್ಯತೆ ಎಂಥವರಿಗೂ ಅರ್ಥವಾಗುತ್ತದೆ.

ಇಂಥ ಘೋರ ಘಟನೆ ಸಂಭವಿಸಿ ಇಡೀ ಗ್ರಾಮವೇ ನಿರ್ಗತಿಕರಾದಾಗಲೂ ಸರ್ಕಾರ ಯಾವುದೇ ಕ್ರಮ ಕೈಕೊಳ್ಳದಿದ್ದಾಗ ಏಪ್ರಿಲ್ 19 ರಂದು ಮಂಡ್ಯದ 'ಸ್ಪಂದನ' - ಮಹಿಳಾ ವೇದಿಕೆ ಮತ್ತು ರೈತ ಸಂಘಟನೆಗಳು ಪ್ರತಿಭಟನಾ ಮೆರವಣಿಗೆ ಮಾಡಿ ಎಸ್. ಪಿ. ಆಫೀಸ್ ಎದುರು ಧರಣಿ ಸತ್ಯಾಗ್ರಹ ನಡೆಸಿದವು. ಆಗ ಎಚ್ಚೆತ್ತ ಸರ್ಕಾರ ಯಡವನಹಳ್ಳಿ ಘಟನೆ ಬಗ್ಗೆ ತನಿಖೆ ಮಾಡಿಸುತ್ತೇವೆ ಎಂದು ಹೇಳಿಕೆ ಕೊಟ್ಟರೆ ಹೊರತು ಸಂಬಂಧಪಟ್ಟ ರಾಜಕಾರಣಿಗಳಾಗಲಿ, ಉಸ್ತುವಾರಿ ಸಚಿವರಾಗಲಿ, ಮುಖ್ಯ ಮಂತ್ರಿಯವರ ಸ್ವಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಎಸ್. ಎಂ. ಕೃಷ್ಣರವರಾಗಲಿ ಘಟನೆ ನಡೆದ ಸ್ಥಳಕ್ಕೆ ಬಂದಿಲ್ಲ ಎಂಬುದು ಅಲ್ಲಿಯ ಜನರ ಅಳಲು. ಅಲ್ಲಿಯ ಅಧಿಕಾರಿಗಳು ಕೂಡ ಯಾವುದಕ್ಕೂ ಸ್ಪಂದಿಸಿಲ್ಲ. ಮುಖ್ಯಮಂತ್ರಿಗಳ ಸೋದರ ಶ್ರೀ ಎಸ್. ಎಂ. ಶಂಕರ ಅವರ ಬೆಂಬಲವೇ ಈ ಅನಾಹುತಕ್ಕೆ ಮತ್ತು ಅನಂತರದ ದಿವ್ಯ ನಿರ್ಲಕ್ಷ್ಯಕ್ಕೆ ಕಾರಣ ಎಂದು ಕಾಂಗ್ರೆಸ್ಸೇತರ ಪಕ್ಷದ ಮುಖಂಡರು ಪತ್ರಿಕೆಯಲ್ಲಿ ಹೇಳಿಕೆ ಕೊಟ್ಟಿದ್ದಾರೆ.

ಏಪ್ರಿಲ್ 29ಕ್ಕೆ ಮಂಡ್ಯದ 'ಸ್ಪಂದನ' ಮಹಿಳಾ ಸಂಘಟನೆ, ಮೈಸೂರಿನ 'ಸಮತಾ' ಪ್ರಗತಿಪರ ಮಹಿಳಾ ವೇದಿಕೆ ಮತ್ತು ಪ್ರಗತಿಪರ ಸಂಘಟನೆಗಳು ಸೇರಿ ಜಿಲ್ಲಾಧಿಕಾರಿಗಳ ಕಛೇರಿಯ ಎದುರು ಇಡೀ ದಿನ ಧರಣಿ ಸತ್ಯಾಗ್ರಹ ನಡೆಸಿ ನ್ಯಾಯಾಂಗ ತನಿಖೆಗೆ ಒತ್ತಾಯಿಸಿದರು. ಅಂದಿನ ಧರಣಿ ಸತ್ಯಾಗ್ರಹದಲ್ಲೇ ಮುಂದಿನ ಕಾರ್ಯಕ್ರಮದ ರೂಪರೇಷೆಯನ್ನು ಗುರುತಿಸಲಾಗಿತ್ತು. ಆದರೆ ಮೇ ಕೊನೆಯ ವಾರದಲ್ಲಿ ಪ್ರಜಾವಾಣಿಯ ಮುಖಪುಟದ ಕೆಳಗೆ ಶ್ರೀ ಪ್ರಕಾಶ ಎಂಬವರ ನೇತೃತ್ವದಲ್ಲಿ- ಮದ್ದೂರಿನ ಯಡವನಹಳ್ಳಿಯಲ್ಲಿ ನಡೆದ ಗುಂಪು ಘರ್ಷಣೆಯ ಬಗ್ಗೆ ತನಿಖೆ ನಡೆಸಲು ಆದೇಶ ಹೊರಡಿಸಿದೆ.

ಈಗ ನಡೆಯುವ ತನಿಖೆ ನಿಷ್ಪಕ್ಷಪಾತವಾಗಿ ಯಾವ ರೀತಿಯಲ್ಲಿ ವಿಚಾರಣೆ ನಡೆಸುತ್ತಾರೆ ಎಂಬುದನ್ನು ಕಾದು ನೋಡಬೇಕಿದೆ. ಯಡವನಹಳ್ಳಿ ಸಂತ್ರಸ್ತರಿಗೆ ನ್ಯಾಯ ದೊರಕಿಸಿ ಕೊಡುವಲ್ಲಿ ಈ ಸಮಿತಿ ಯಾವ ಪ್ರಮಾಣದಲ್ಲಿ ಕಾರ್ಯ ನಿರ್ವಹಿಸುವರು ಎಂದು ಕಾದುನೋಡೋಣ. ●

---

ಪತ್ರಿಕಾ ಹೇಳಿಕೆ

## ಭಾನು ಮುಷ್ತಾಕ್ ಒಬ್ಬ ಪ್ರಗತಿಪರ ಬರಹಗಾರ್ತಿ

ಭಾನು ಮುಸ್ಲಿಂ ಮೂಲಭೂತವಾದಿಗಳು ಮಹಿಳೆಯರ ಹಕ್ಕುಗಳನ್ನು ಕಸಿದುಕೊಳ್ಳುವ ಬಗ್ಗೆ ದಿಟ್ಟವಾಗಿ ಮಾತನಾಡಿ ಇಂದು ಅವರಿಂದ ಸಾಮಾಜಿಕ ಬಹಿಷ್ಕಾರಕ್ಕೆ ಒಳಗಾಗಿದ್ದಾರೆ.

ಇಂದು ಜಾಗತೀಕರಣದ ಹಂತದಲ್ಲಿ ಮೂಲಭೂತವಾದಿಗಳು ಧರ್ಮ ಸಂಸ್ಕೃತಿಯ ಹೆಸರಿನಲ್ಲಿ ಮಹಿಳೆಯರ ಮೇಲೆ ದಿಗ್ಬಂಧನ ಹೇರುತ್ತಿರುವುದು ಜಾಗತಿಕ ಇತಿಹಾಸವಾಗತೊಡಗಿದೆ. ಹಿಂದೂ ಮೂಲಭೂತವಾದಿಗಳು ಒಂದು ಕಡೆ ಸಂಸ್ಕೃತಿಯ ಹೆಸರಿನಲ್ಲಿ ಪಿತೃಪ್ರಧಾನ ಮೌಲ್ಯಗಳ ಹಿಡಿತದಲ್ಲಿ ಧರ್ಮ ಎತ್ತಿಹಿಡಿಯುತ್ತಿದ್ದರೆ, ಇತರ ಧರ್ಮ ಕೋಮುಗಳೂ ಸಹ ಮೂಲಭೂತವಾದಿ ಹಿನ್ನೆಲೆಯಲ್ಲಿ ತಮ್ಮ ಧರ್ಮ ಗ್ರಂಥಗಳ ಶ್ರೇಷ್ಠತೆಯನ್ನು ಮೆರೆಯತೊಡಗಿವೆ. ಇದರಲ್ಲಿ ಬದುಕುವ ಹಕ್ಕನ್ನೇ ಮಹಿಳೆ ಕಳೆದುಕೊಳ್ಳತೊಡಗಿದ್ದಾಳೆ.

ಬದುಕುವ, ಪ್ರಾರ್ಥಿಸುವ, ಮಸೀದಿ, ದೇವಾಲಯಗಳು, ಕಟ್ಟೆ ಹತ್ತುವ, ಪೂಜಾರಿ, ಮೌಲ್ವಿಗಳಾಗುವ ಹಕ್ಕು ಪ್ರತಿಯೊಬ್ಬ ಮಹಿಳೆಗಿದೆ. ಮತ್ತು ಆಯ್ಕೆಯ ಸ್ವಾತಂತ್ರ್ಯ ಮಹಿಳೆಗಿರಲಿ ಮತ್ತು ಈ ದಿಕ್ಕಿನಲ್ಲೇ ಎಲ್ಲ ಧರ್ಮ ಗ್ರಂಥಗಳು ಮರು ವಿವೇಚನೆಯಾಗ ಬೇಕಿದೆ. ಭಾನು ಮುಷ್ತಾಕ್ ಎತ್ತಿದ ಪ್ರಶ್ನೆ ದೇವಾಲಯಕ್ಕೆ ಸಂಬಂಧಿಸಿದೆ. ಚರ್ಚೆಗೆ ಸಂಬಂಧಿಸಿದೆ. ಮಸೀದಿಗೆ ಸಂಬಂಧಿಸಿದೆ. ಅವರ ಮೇಲೆ ಹೇರಿದ ದಿಗ್ಬಂಧನ ನಮ್ಮೆಲ್ಲರ ಮೇಲೆ ಹೇರಿದ ದಿಗ್ಬಂಧನವಾಗಿದೆ. 'ಮಾನಸ' ಭಾನು ಮುಷ್ತಾಕ್‌ರವರನ್ನು ಬೆಂಬಲಿಸುವ ಮೂಲಕ ಮೂಲಭೂತವಾದಿಗಳ ವರ್ತನೆಯನ್ನು ಖಂಡಿಸುತ್ತದೆ.

# "ಬಾನು ಬಹಿಷ್ಕಾರ"

ಧರ್ಮದ ವಿಚಾರ ಬಂದಾಗ ಜನ ಏಕಿಷ್ಟು ಮಡಿವಂತಿಕೆ ತೋರುತ್ತಾರೋ ಗೊತ್ತಿಲ್ಲ. ಅದರಲ್ಲೂ ಭಾರತ ದೇಶದಲ್ಲಿ ಇಂದು ಎದ್ದು ಕಾಣುತ್ತಿರುವ ಧಾರ್ಮಿಕ ಮೂಲಭೂತವಾದಿಗಳ ಭಯೋತ್ಪಾದನೆ ಅತ್ಯಂತ ಆತಂಕಕಾರಿಯಾದುದು. ಸೃಜನಶೀಲ ಸಾಹಿತ್ಯ ಸೃಷ್ಟಿಯಾಗಲಿ, ಸಂಶೋಧನೆಗಳಿಗಾಗಲಿ ಧರ್ಮ ತನ್ನ ಹಾದಿಯನ್ನು ಮುಚ್ಚಿದಾಗ ಅವುಗಳ ಪರಿಪೂರ್ಣತೆ ಎಂದೆಂದೂ ಅಸಾಧ್ಯ. ಮೂಲಭೂತವಾದಿಗಳಿಂದು ಹಿಂದೆಂದಿಗಿಂತಲೂ ಪ್ರತಿಗಾಮಿತ್ವವನ್ನು ತೋರುತ್ತಿರುವುದು ವಿಚಿತ್ರವಾಗಿದೆ. ಲೇಖಕಿ ಬಾನು ಮುಷ್ತಾಕರಿಗೆ ಮೂಲಭೂತವಾದಿಗಳು ಹಾಕಿರುವ ಈ ಬಹಿಷ್ಕಾರ ಯಾರಿಗೂ ಗೌರವ ತರುವಂತಹ ನಿಲುವಲ್ಲ. ಇದನ್ನು ಅವರಿಗೆ ಅರ್ಥಮಾಡಿಸುವವರು ಯಾರು?

ಮಸೀದಿಯಲ್ಲಿ ಮಹಿಳೆಗೆ ಪ್ರಾರ್ಥನೆ ಸಲ್ಲಿಸುವ ಹಕ್ಕಿನ ಬಗ್ಗೆ ಬಾನು ಆಡಿರುವ ಮಾತುಗಳು ಇಂದಿನದೇನಲ್ಲ. ದೇಶದ ಹಲವೆಡೆ ಈ ಮಾತಿಗೆ ಮನ್ನಣೆ ಸಿಕ್ಕು ಮಹಿಳೆ ಮಸೀದಿಗಳಲ್ಲಿ ಪ್ರಾರ್ಥಿಸುವ ಹಕ್ಕನ್ನು ಪಡೆದಿರುವ ವಿಚಾರ ಎಲ್ಲರಿಗೂ ತಿಳಿದೇ ಇದೆ. ಕರ್ನಾಟಕದಲ್ಲೂ ಇದಕ್ಕೆ ಅವಕಾಶವಿರುವುದು ತಿಳಿದುಬಂದಿದೆ. ಇಂಥದ್ದರಲ್ಲಿ ಬಾನು ಅವರ ಮಾತುಗಳು ಮೂಲಭೂತವಾದಿಗಳನ್ನು ಏಕೆ ಕೆರಳಿಸಿದವೋ ತಿಳಿದಿಲ್ಲ. ಅಥವಾ ಅವರಿಗೆ ಮಹಿಳೆ ಮಸೀದಿಯಲ್ಲಿ ಪ್ರಾರ್ಥನೆ ಮಾಡುತ್ತಿರುವ ವಿಚಾರವೇ ಗೊತ್ತಿಲ್ಲ!

ಬಾನು 'ಬೆಂಕಿ ಮಳೆ', ಕಥಾ ಸಂಕಲನಕ್ಕೆ ಪ್ರಶಸ್ತಿ ಗಳಿಸಿದ ಸಂದರ್ಭದಲ್ಲಿ ಅವರು ಆಡಿರುವ ಮಾತು ವಿವಾದ ಮೂಡಿಸಿರುವುದು ಮೇಲ್ನೋಟಕ್ಕೆ ಕಾಕತಾಳೀಯವೆಂಬಂತೆ ತೋರುತ್ತದೆ. ಆದರೆ ವಾಸ್ತವವಾದ ವಿಚಾರಕ್ಕೆ ಬೇರೆಯದೆ ಆಯಾಮವಿರುವುದು ಸ್ಪಷ್ಟ. ಪ್ರಶಸ್ತಿ ವಿಜೇತ ಕೃತಿಯಲ್ಲಿ ಲೇಖಕಿ ಹಲವಾರು ಕುರುಡು ನಂಬಿಕೆಗಳ ಬಗ್ಗೆ ವ್ಯಂಗ್ಯದ ಚಾಟಿಯೇಟು ಬಾರಿಸಿದ್ದಾರೆ. ಇದು ಬಹುಶಃ ಮೂಲಭೂತವಾದಿಗಳನ್ನು ಕೆರಳಿಸಿರಬಹುದು. 'ಬೆಂಕಿ ಮಳೆ' ಎಂಬ ಕತೆಯಲ್ಲಿ ಯಾವುದೋ ದಿಕ್ಕಿಲ್ಲದ ಶವವನ್ನು ಮುಸ್ಲಿಮನೆಂದು ತಿಳಿದು, ಹಿಂದೂ ರುದ್ರಭೂಮಿಯಲ್ಲಿ ಹೂತಿರುವ ಶವವನ್ನು ಹೋರಾಡಿ ತಂದು ಮುಸ್ಲಿಂ ರುದ್ರಭೂಮಿಯಲ್ಲಿ ಹೂತು, ನಂತರ ಆ ಶವ ತಾವು ಭಾವಿಸಿದ ವ್ಯಕ್ತಿಯದಲ್ಲವೆಂದು ತಿಳಿದು ಮೌನವಾಗಿದ್ದು ಭ್ರಮನಿರಸನ ಹೊಂದುವ ಒಂದು ಊರಿನ ಜನಾಂಗದ ಅವಸ್ಥೆಯನ್ನು ಲೇಖಕಿ ಪ್ರಸ್ತಾಪಿಸುತ್ತಾರೆ. ಓರ್ವ ಮುಸ್ಲಿಂ ಲೇಖಕಿಯಾಗಿ ಬಾನು ತೋರುವ ಈ ಎದೆಗಾರಿಕೆ ಮೂಲಭೂತವಾದಿಗಳ ಎದೆಯನ್ನು ನಡುಗಿಸಿರಬಹುದು!

ಅದಕ್ಕಾಗಿಯೇ ಸಿಕ್ಕ ಅವಕಾಶವನ್ನು ಬಳಸಿಕೊಂಡು ಬಹಿಷ್ಕಾರ ಹಾಕಿಬಿಟ್ಟಿರಬೇಕು. ಅದೂ ಲೇಖಕಿಗೆ ಮಾತ್ರವಲ್ಲ, ಅವರ ಸೋದರರನ್ನೂ ಒಳಗೊಂಡಂತೆ ಇಡೀ ಕುಟುಂಬಕ್ಕೆ! ಅವರೆಲ್ಲ ಯಾವ ಅಪರಾಧ ಮಾಡಿದ್ದಾರೆ? ಅವರಿಗೇಕೆ ಬಹಿಷ್ಕಾರ?

ಈ ಬಹಿಷ್ಕಾರ ಹಾಕಿರುವ ವ್ಯವಸ್ಥೆಯನ್ನೇ ಬಹಿಷ್ಕರಿಸಿ ಬದುಕುವ ಧೈರ್ಯ ಖಂಡಿತಾ ಬಾನು ಅವರಿಗಿದೆ. ಆದರೆ ಇದರ ಲಾಭ ಪಡೆದು ರಾಜಕೀಯ ಸ್ವರೂಪ ಪಡೆಯಬಹುದಾದ ಕೋಮುಗಲಭೆಗಳಿಂದ ಉಂಟಾಗಬಹುದಾದ ಅನಾಹುತಗಳನ್ನು ಗಮನದಲ್ಲಿಟ್ಟುಕೊಂಡು ಬಾನು ಈಗ ಯಾವ ಹೇಳಿಕೆಗಳನ್ನು ಕೊಡದೆ ಮೌನವಾಗಿರುವುದು ನಿಜಕ್ಕೂ ಅವರಿಗಿರುವ ಸಾಮಾಜಿಕ ಕಳಕಳಿಯನ್ನು ತೋರುತ್ತದೆ. ಹಲವಾರು ಮುಸ್ಲಿಂ ವಿಚಾರವಂತರು ಬಾನು ಅವರನ್ನು ಬೆಂಬಲಿಸಿ ಮಾತಾಡಿರುವುದು ಆಶಾದಾಯಕವಾದ ವಿಚಾರ.

ನಮ್ಮ ದೇಶದ ವೈಚಾರಿಕ ಬದುಕಿಗೆ ದೊಡ್ಡ ಸವಾಲಾಗಿರುವ ಮೂಲಭೂತವಾದಿಗಳ ಭಯೋತ್ಪಾದನೆಯನ್ನು ಅಡಗಿಸಲು ಸರ್ಕಾರ ಏನು ಮಾಡಿದೆ? ಒಬ್ಬ ಲೇಖಕಿಗೆ ಯಾವ ರಕ್ಷಣೆಯನ್ನು ಒದಗಿಸಬಲ್ಲದು? ಅಲ್ಲಿಲ್ಲಿ ನೀಡಿದ ಹೇಳಿಕೆಯನ್ನು ಬಿಟ್ಟರೆ ಬಲವಾದ ಪ್ರತಿಭಟನೆಯನ್ನು ನಾವೇಕೆ ತೋರುತ್ತಿಲ್ಲ? ಹಾಸನದಲ್ಲಿರುವ ವಿಚಾರವಂತರು ಒಂದು ಮೌನ ಪ್ರತಿಭಟನೆಯನ್ನಾದರೂ ಮಾಡಲಿಲ್ಲವೇಕೆ?

ಹಿಂದೆ ಸಾರಾ ಅವರಿಗೆ ಮೂಲಭೂತವಾದಿಗಳಿಂದ ತೊಂದರೆಯಾಗಿದ್ದಾಗ ಅವರನ್ನು ಬೆಂಬಲಿಸುವುದರ ಹಿಂದೆ ಸಮಷ್ಟಿ ಕೆಲಸ ಮಾಡಲಿಲ್ಲ; ಬೆಂಬಲಿಸಿದ ವಿಚಾರವಂತರು ಮುಸ್ಲಿಮರ ವಿರೋಧ ಕಟ್ಟಿಕೊಳ್ಳಬೇಕಾಯ್ತೆಂದು ರಹಮತ್ ತರೀಕೆರೆ ವ್ಯಕ್ತಪಡಿಸಿರುವ ಆತಂಕ ಈ ಸಂದರ್ಭದಲ್ಲಿ ನಮ್ಮನ್ನು ಎಚ್ಚರಿಸಬೇಕಾಗಿದೆ.

'ಬೆಂಕಿ ಮಳೆ' ಬಾನು ಅವರ ಎರಡನೇ ಕಥಾಸಂಕಲನ. ಇದಕ್ಕೆ ಪ್ರಶಸ್ತಿ ಲಭಿಸಿರುವ ಸಂದರ್ಭದಲ್ಲಿ ಎದ್ದಿರುವ ಈ ಬಹಿಷ್ಕಾರದ ವಿವಾದ ಈ ದೊಡ್ಡ ದೇಶದ ಪ್ರಜಾಪ್ರಭುತ್ವ ವ್ಯವಸ್ಥೆಯ ಬಹುದೊಡ್ಡ ವ್ಯಂಗ್ಯವಲ್ಲದೆ ಮತ್ತೇನು?

○ ಸತ್ಯನಾರಾಯಣ್ ಎಚ್. ಎಸ್.

# ಶಾಲೆಗಳಲ್ಲಿ ಲಿಂಗತಾರತಮ್ಯ

○ ಪಾರ್ವತಿ ಜಿ. ಐತಾಳ್

ನಮ್ಮ ಸಾಮಾಜಿಕ ಬದುಕಿನಲ್ಲಿ ಇಂದು ವಿಜ್ಞಾನದ ಅದ್ಭುತ ಬೆಳವಣಿಗೆಯ ಹೊರತಾಗಿಯೂ ಲಿಂಗತಾರತಮ್ಯವೆಂಬುದು ಕತ್ತಲು-ಬೆಳಕುಗಳ ಹಾಗೆ ಎಲ್ಲರ ಅನುಭವಕ್ಕೆ ಸ್ಪಷ್ಟಗೋಚರವಾಗಿರುವಂತಹ ನಡವಳಿಕೆಯಾಗಿಬಿಟ್ಟಿದೆ. ಈ ಪೂರ್ವಾಗ್ರಹದ ಪರಿಣಾಮವಾಗಿ ಯಾತನೆಯನ್ನು ಸಹಿಸಿಕೊಳ್ಳಬೇಕಾದಂತಹ ದುರದೃಷ್ಟವು ಯಾವಾಗಲೂ ಹೆಣ್ಣಿನ ಪಾಲಿಗೆಯೇ ಕಟ್ಟಿಟ್ಟ ಬುತ್ತಿ ಎಂದು ಬಿಡಿಸಿ ಹೇಳಬೇಕಾಗಿಲ್ಲ. ತಾಯಿಯ ಗರ್ಭದೊಳಗೆ ಭ್ರೂಣ ಸ್ಥಿತಿಯಲ್ಲಿರುವಾಗಲೇ ಪ್ರಾರಂಭವಾಗುವ ಹೆಣ್ಣಿನ ಈ ಅವಗಣನೆಯು ಗೋರಿಯನ್ನು ಸೇರುವ ತನಕವೂ ಆಕೆಯನ್ನು ಬೇತಾಳದಂತೆ ಬೆನ್ನು ಹಿಡಿಯುವುದರಿಂದಲೇ 'ಹೆಣ್ಣಾಗಿ ಹುಟ್ಟೋಕಿಂತ ಮಣ್ಣಾಗಿ ಹುಟ್ಟಿದರೆ.....' ಎಂದು ನಮ್ಮ ಹಿರಿಯರು ಹಾಡಿರಬಹುದು.

ಈ ಜಗತ್ತಿನಲ್ಲಿ ದುರ್ಬಲರ ಶೋಷಣೆಯೆಂಬುದು ಅನೇಕ ಸ್ತರಗಳಲ್ಲಿ ನಡೆಯುತ್ತಾ ಇರುವುದನ್ನು ನಾವು ನೋಡುತ್ತೇವೆ. ಜಾತಿಭೇದ, ವರ್ಗವೈಷಮ್ಯ, ಚಿಕ್ಕ ಮಕ್ಕಳ ಶೋಷಣೆ, ದಲಿತರ ಅವಗಣನೆ ಮುಂತಾದ ಹಲವು ಸಮಸ್ಯೆಗಳೊಂದಿಗೆ ಲಿಂಗಭೇದದ ಸಮಸ್ಯೆಯೂ ಇವತ್ತು ಭೂತಾಕಾರವಾಗಿ ಬೆಳೆದು ನಮ್ಮನ್ನು ಕಾಡುತ್ತಲೇ ಇದೆ. ಬಹಳ ಹಿಂದಿನಿಂದಲೂ ಪುರುಷ ಪ್ರಧಾನವಾಗಿಯೇ ಬೆಳೆದು ಬಂದ ನಮ್ಮ ಸಮಾಜದಲ್ಲಿ ಸ್ತ್ರೀಯರು ಮನೆಯ ನಾಲ್ಕು ಗೋಡೆಗಳ ನಡುವೆಯೇ ಜೀವನ ಸವೆಸಬೇಕಾದ ಸ್ಥಿತಿ ಒಂದು ಕಾಲದಲ್ಲಿ ಇತ್ತು. ಆ ಕಾರಣದಿಂದಾಗಿ ಹೆಣ್ಣು ಮಕ್ಕಳಿಗೆ ಶಿಕ್ಷಣದ ಅಗತ್ಯವಿಲ್ಲ ಎಂಬುದು ಪುರುಷರ ವಾದವಾಗಿತ್ತು. ಅಂದಿನ ಗುರುಕುಲ ಪದ್ಧತಿಯ ಶಿಕ್ಷಣದಲ್ಲಿ ಉಚ್ಚಕುಲದ ಗಂಡುಮಕ್ಕಳಿಗೆ ಮಾತ್ರ ಅವಕಾಶವಿರುತ್ತಿತ್ತು ಎಂದು ವಾದಿಸುತ್ತ ಕೆಲವರು ಗಾರ್ಗಿ, ಮೈತ್ರೇಯಿ, ಘೋಷಾ, ಲೋಪಾಮುದ್ರೆಯಂಥವರ ಉದಾಹರಣೆಗಳನ್ನು ಕೊಡುತ್ತಾರಾದರೂ ಅವರೆಲ್ಲರೂ ಉಚ್ಚಕುಲದ ಸ್ತ್ರೀಯರೇ ಆಗಿದ್ದರೆಂಬುದನ್ನು ನಾವು ಮರೆಯಬಾರದು. ಆದರೆ ಆಗ ಜನಪದ ಜೀವನದಲ್ಲಿ ಕೆಳವರ್ಗದ ಸಾಮಾನ್ಯ ಸ್ತ್ರೀಯರ ಬದುಕು ಹೇಗಿತ್ತೆಂಬುದರ ಬಗ್ಗೆ ಸ್ಪಷ್ಟ ವಿವರಗಳು ನಮಗೆ ಎಲ್ಲೂ ಸಿಗುವುದಿಲ್ಲ.

ಕಾಲ ಕಳೆದಂತೆ ಸಮಾಜದಲ್ಲಿ ಬದಲಾವಣೆಗಳು ಕಂಡುಬಂದವು. ಇವತ್ತಿನ ಕಂಪ್ಯೂಟರ್ ಯುಗದಲ್ಲಿ ನಾವು ನಮ್ಮ ಬದುಕಿನ ರೀತಿ-ನೀತಿಗಳಲ್ಲಿ ಕ್ಷಣಕ್ಷಣಕ್ಕೂ ಬದಲಾವಣೆಗಳನ್ನು ಕಾಣುತ್ತಿದ್ದೇವೆ. ಬ್ರಿಟಿಷರು ನಮ್ಮ ದೇಶಕ್ಕೆ ಬಂದು ಹೋದಾಗಿನಿಂದ ಗುರುಕುಲ ಪದ್ಧತಿಯ ಶಿಕ್ಷಣವು ಮಾಯವಾಗಿ ಶಾಲಾ-ಕಾಲೇಜುಗಳಲ್ಲಿ ಔಪಚಾರಿಕ ಶಿಕ್ಷಣ ಪದ್ಧತಿ ಪ್ರಾರಂಭವಾಗಿ ಶತಮಾನಗಳೇ ಸಂದಿವೆ. ಭಾರತದಲ್ಲಿ 19ನೇ ಶತಮಾನದಲ್ಲಿ ನಡೆದ ಸುಧಾರಣಾವಾದಿ ಚಳುವಳಿಯಲ್ಲಿ ರಾಜಾರಾಂ ಮೋಹನ್‌ರಾಯ್, ಈಶ್ವರಚಂದ್ರ ವಿದ್ಯಾಸಾಗರ್ ಮುಂತಾದ ಸಮಾಜ ಸುಧಾರಕರು ಸ್ತ್ರೀಯರ ಅನೇಕ ಸಮಸ್ಯೆಗಳ ವಿರುದ್ಧ ದನಿಯೆತ್ತಿದ್ದರು. ಆ ನಂತರದ ರಾಷ್ಟ್ರೀಯ ಚಳುವಳಿಯೂ ಸ್ತ್ರೀಯರಿಗಾಗುವ ಅನ್ಯಾಯಗಳ ವಿರುದ್ಧದ ಹೋರಾಟವನ್ನು ತಮ್ಮ ಕಾರ್ಯವ್ಯಾಪ್ತಿಯ ಒಂದು ಅಂಗವನ್ನಾಗಿ ಪರಿಗಣಿಸಿತು. ಗಾಂಧೀಜಿಯವರ ನೇತೃತ್ವದಲ್ಲಿ ನಡೆದ ಸ್ವಾತಂತ್ರ್ಯ ಆಂದೋಲನದಲ್ಲೂ ಸ್ತ್ರೀಯರು ಹೊಸಿಲು ದಾಟಿ ಹೊರಗೆ ಬಂದರು. ಈ ಎಲ್ಲ ಹೋರಾಟಗಳ ಫಲವಾಗಿ ಸ್ತ್ರೀ ಶಿಕ್ಷಣಕ್ಕೆ ಆದ್ಯತೆ ಸಿಕ್ಕಿತು. ಅವರ ಆತ್ಮವಿಶ್ವಾಸ ಹೆಚ್ಚಿ ಅವರು ತಮ್ಮೊಳಗೆ ಸುಪ್ತವಾಗಿದ್ದ ಶಕ್ತಿಯನ್ನು ಗುರುತಿಸಿಕೊಳ್ಳುವಂತಾಯಿತು.

ಹೀಗೆ ಮಹಿಳೆಯರ ಅನೇಕ ವರ್ಷಗಳ ಹೋರಾಟದ ಪರಿಣಾಮವಾಗಿ ಸ್ತ್ರೀ ಶಿಕ್ಷಣವೆಂಬುದು ಇವತ್ತು ಸ್ವೀಕೃತ ವಿಚಾರವಾಗಿಬಿಟ್ಟಿದೆ. ಆದರೆ ಶಾಲೆಗಳಲ್ಲಿ ಕಲಿಯುತ್ತಿರುವ ಎಲ್ಲಾ ವರ್ಗಗಳ ಎಳೆಯ ಹೆಣ್ಣುಮಕ್ಕಳ ಸ್ಥಿತಿ ಹೇಗಿದೆ ಎಂಬುದರ ಬಗ್ಗೆ ಅಧ್ಯಯನ ಮಾಡಿದರೆ ಕಾಣುವ ಸತ್ಯಗಳು ಮಾತ್ರ ಅತ್ಯಂತ ನಿರಾಶಾದಾಯಕವಾಗಿವೆ. ಮುಖ್ಯವಾಗಿ ಬಡ ಹಾಗೂ ಅನಕ್ಷರಸ್ಥ ತಂದೆ-ತಾಯಿಗಳ ಮಕ್ಕಳು ಹೋಗುವಂಥ ಹಳ್ಳಿ ಶಾಲೆಗಳಲ್ಲಿ ಹೆಣ್ಣುಮಕ್ಕಳ ಬಗೆಗಿನ ಪೂರ್ವಾಗ್ರಹ ಇನ್ನೂ ಬಿಟ್ಟು ಹೋಗಿಲ್ಲ. ಇಡಿಯ ಸಮಾಜದಲ್ಲಿ ಪರಿವರ್ತನೆಯಾಗದೆ ಶಾಲೆಗಳು ಮಾತ್ರ ಲಿಂಗತಾರತಮ್ಯದಿಂದ ಮುಕ್ತವಾಗುವುದಾದರೂ ಹೇಗೆ ಸಾಧ್ಯ? ಹೆಣ್ಣುಮಕ್ಕಳು ಹುಟ್ಟುವುದೇ ಒಂದು ಶಾಪವೆಂದು ತಿಳಿದುಕೊಳ್ಳುವ ಸಮಾಜದಲ್ಲಿ ಇವತ್ತು ಕೂಡಾ 'ಹೆಣ್ಣಿಗೊಂದು ನೀತಿ, ಗಂಡಿಗೊಂದು ನೀತಿ' ಎಂಬ ತಾರತಮ್ಯ ಧೋರಣೆ ಎಲ್ಲೆಲ್ಲೂ ಕಾಣುತ್ತಾ ಇದೆ. ಇದೇ ತಾತ್ಸಾರದ ಧೋರಣೆ ಶಾಲೆಗಳಲ್ಲೂ ಮುಂದುವರಿಯುತ್ತದೆ.

ಮನೆಯಲ್ಲಿ ಮನೆಗೆಲಸದಲ್ಲಿ ತಾಯಿಗೆ ನೆರವಾಗಿ ಬರುವ ಕೆಲವು ಹೆಣ್ಣುಮಕ್ಕಳಿಗೆ ದೈಹಿಕವಾಗಿ ದಣಿವಾದಾಗ ಪಾಠವು ತಲೆಗೆ ಹತ್ತುವುದಿಲ್ಲ. ಆಗ ಅಧ್ಯಾಪಕರಾಗಿದ್ದವರು ಅವಳನ್ನು 'ಅಡಿಗೆ ಮನೆಯಲ್ಲಿ ಬೂದಿ ಬಾಚುವವರಿಗೆ ಶಾಲೆಗೆ ಬರುವ ಅಗತ್ಯವಾದರೂ ಏನು?' ಎಂದು ಮೂದಲಿಸಿ ಅವಳು ಮತ್ತಷ್ಟು ಕೀಳರಿಮೆಯಿಂದ ಮುದುಡುವಂತೆ ಮಾಡುವುದಿದೆ. ಮನೆಯಲ್ಲಿ ಕೂಡಾ 'ಹೆಣ್ಣು ಹೆಣ್ಣೆಂದು ಪದೇ ಪದೇ ಹೀಗಳೆಸಿಕೊಂಡ ಹೆಣ್ಣುಮಕ್ಕಳು ಆತ್ಮವಿಶ್ವಾಸವಿಲ್ಲದೇ ಇರುವುದರಿಂದ ತೀರಾ ನಾಚಿಕೆ ಸ್ವಭಾವದವರಾಗಿರುತ್ತಾರೆ. ಸದಾ ತಲೆತಗ್ಗಿಸಿಕೊಂಡೋ ಅಥವಾ ಬಾಯಿಗೆ ಅಡ್ಡ ಕೈಹಿಡಿದುಕೊಂಡೋ ಅವರು ಮಾತನಾಡುತ್ತಾರೆ. ಅಂಥವರನ್ನು ಸಹನೆ-ಪ್ರೀತಿಗಳಿಂದ ನೋಡಿಕೊಂಡು ಅವರಲ್ಲಿ ಧೈರ್ಯ-ಸ್ಥೈರ್ಯಗಳನ್ನು ತುಂಬಿಸುವುದು ಹೆಣ್ಣುಮಕ್ಕಳ ಬಗ್ಗೆ ಕಾಳಜಿಯಿದ್ದ ಅಧ್ಯಾಪಕರ ಕರ್ತವ್ಯ. ಆದರೆ ಎಷ್ಟೋ ಬಾರಿ ಇಂಥ ವಿಷಯಗಳನ್ನು ತೀರಾ ಲಘುವಾಗಿ ತೆಗೆದುಕೊಳ್ಳುವ ಕೆಲವು ಅಧ್ಯಾಪಕರು ಅಂತಹ ಹುಡುಗಿಯರನ್ನು ಅವಮಾನಿಸುವ ಉದ್ದೇಶದಿಂದಲೇ ಹೊಡೆದು ಬಡಿದು, ಬೈದು-ಭಂಗಿಸಿ ಬೆಂಚಿನ ಮೇಲೆ ಗಂಟೆಗಟ್ಟಲೆ ನಿಲ್ಲಿಸುವ ಶಿಕ್ಷೆಯನ್ನು ಕೊಟ್ಟು ಒಳಗೊಳಗೇ ಸಂತೋಷಪಟ್ಟುಕೊಳ್ಳುವುದಿದೆ.

ಶಾಲೆಗಳಲ್ಲಿ ಹೆಚ್ಚಾಗಿ ಕೆಲವು ಕೆಲಸಗಳನ್ನು ಹೆಣ್ಣುಮಕ್ಕಳ ಮೇಲೆಯೇ ವಿಧಿಸುವ ಪರಿಪಾಠವಿರುತ್ತದೆ - ಕಸ ಗುಡಿಸುವುದು, ಅಂಗಳ ಸ್ವಚ್ಛಗೊಳಿಸುವುದು, ಕುಡಿಯಲು ನೀರು ತಂದು ಹಾಕುವುದು, ತೋಟಕ್ಕೆ ನೀರು ಹಾಕುವುದು ಇತ್ಯಾದಿ. ಈ ಕೆಲಸಗಳು 'ಹೆಣ್ಣುಮಕ್ಕಳದ್ದೇ ಹೊರತು ಗಂಡುಮಕ್ಕಳು ಮಾಡುವುದಲ್ಲ' ಎನ್ನುತ್ತ ಗಂಡುಮಕ್ಕಳನ್ನು ಆರಾಮವಾಗಿ ಆಡಲು ಕಳಿಸುವ ಪರಿಪಾಠ ಈಗಲೂ ಹಲವು ಶಾಲೆಗಳಲ್ಲಿ ನಡೆಯುತ್ತಿದೆ. ಎಷ್ಟೋ ಬಾರಿ ಕೀಟಲೆ ಸ್ವಭಾವದ ಹುಡುಗರು ಉದ್ದೇಶ ಪೂರ್ವಕವಾಗಿ ಕಸ ಹರಡುವುದು, ತುಂಬಿಸಿಟ್ಟ ನೀರನ್ನು ಚೆಲ್ಲುವುದು, ಹೆಣ್ಣುಮಕ್ಕಳ ಮೈ ಮೇಲೆ ನೀರು ಎರಚುವುದು ಮುಂತಾದ ಹಲವು ರೀತಿಗಳಿಂದ ಕೆಲಸದಲ್ಲಿ ನಿರತರಾಗಿರುವ ಹೆಣ್ಣುಮಕ್ಕಳಿಗೆ ಉಪಟಳ ಕೊಟ್ಟರೂ ಕೂಡಾ ಅದು 'ಗಂಡು ಮಕ್ಕಳ ಸ್ವಭಾವ' ಎಂದು ಹೇಳಿ ಅವರನ್ನು ಶಿಕ್ಷಿಸದೇ ಬಿಡುವುದೂ ಇದೆ. ಶಾಲೆಗಳಲ್ಲಿ ಹಿಂದೆ ಬಡ ಮಕ್ಕಳಿಗೆ ಸರಕಾರವು ಉಪ್ಪಿಟ್ಟು-ಹಾಲುಗಳ ಸರಬರಾಜು ಮಾಡುತ್ತಿದ್ದ ಕಾಲದಲ್ಲಿ ಅವನ್ನೆಲ್ಲ ಬಡಿಸುವ ಕೆಲಸವೂ ಹೆಣ್ಣುಮಕ್ಕಳ ಪಾಲಿಗೆ ಸಿಗುತ್ತಿತ್ತು. ಮುಂದೆ ಗೃಹಿಣಿಯರಾಗುವವರು ಕಲಿತುಕೊಳ್ಳಬೇಕಾದ ಕೆಲಸವಲ್ಲವೇ ಎಂಬ ಹಾಸ್ಯಾಸ್ಪದ ವಿವರಣೆಯನ್ನು ಅಧ್ಯಾಪಕರು ನೀಡುತ್ತಿದ್ದರು.

ಶಾಲೆಗಳಲ್ಲಿನ ಆಟೋಟ ಹಾಗೂ ಕ್ರೀಡಾ ವ್ಯವಸ್ಥೆಗಳ ವಿಚಾರದಲ್ಲಿ ತೋರಿಸುವಂತಹ ಲಿಂಗ ತಾರತಮ್ಯವು ಅತ್ಯಂತ ದುಃಖಕರವಾದದ್ದು. ಎಷ್ಟೋ ಶಾಲೆಗಳಲ್ಲಿ ದೈಹಿಕ ಶಿಕ್ಷಣ ಶಿಕ್ಷಕರ ದೃಷ್ಟಿಯಲ್ಲಿ ಹೆಣ್ಣುಮಕ್ಕಳು ಆಟಗಳಿಗೆ ಅರ್ಹರೇ ಅಲ್ಲ. ಆಟದ ಅವಧಿಯಲ್ಲಿ ಗಂಡುಮಕ್ಕಳನ್ನು ಮಾತ್ರ ಆಡಿಸುವ ಇವರು ಹೆಣ್ಣುಮಕ್ಕಳನ್ನು ಮರದ ನೆರಳಲ್ಲಿ ಕುಳಿತು ನೋಡುತ್ತಾ ಇರಿ ಎಂದೋ ಅಥವಾ ಬೇರೇನಾದರೂ 'ನಿಮ್ಮ ಆಟ' ಆಡಿ ಎಂದೋ ಹೇಳಿ ಜಾರಿಕೊಳ್ಳುತ್ತಾರೆ. ಗಂಡುಮಕ್ಕಳು ಕ್ರಿಕೆಟ್ ಆಡಿದರೆ ಹೆಣ್ಣುಮಕ್ಕಳು ಅವರಷ್ಟಕ್ಕೆ ಕುಂಟಾಬಿಲ್ಲೆಯೋ ಹುಲಿ-ದನವೋ ಆಡುತ್ತ ತಮ್ಮ ಆಟಗಳನ್ನು ಸಂಘಟಿಸಿಕೊಳ್ಳಬೇಕಾಗುತ್ತದೆ. ಅಧ್ಯಾಪಕರು ತಮ್ಮ ಬಗ್ಗೆ ಗಮನ ಹರಿಸದೇ ಇದ್ದಾಗ ಹೆಣ್ಣುಮಕ್ಕಳು ನೊಂದುಕೊಳ್ಳುತ್ತಾರೆ. ಕೆಲವು ಶಾಲೆಗಳಲ್ಲಿ ಕ್ರಿಕೆಟ್ ಆಟದ ಹೊಸ ಸಲಕರಣೆಗಳನ್ನು ಆಗಾಗ ಬೇಕಾದಂತೆ ತರಿಸುವ ದೈಹಿಕ ಶಿಕ್ಷಣದ ಅಧ್ಯಾಪಕರು ಹೆಣ್ಣುಮಕ್ಕಳಿಗೆಂದೇ ಮೀಸಲಾದ ತ್ರೋಬಾಲ್, ಟೆನ್ನಿಕ್ವೈಟ್ ಸಲಕರಣೆಗಳು ಹಾಳಾದರೆ ವರ್ಷಗಟ್ಟಲೆ ಆ ಬಗ್ಗೆ ಮಾತನಾಡದೆ ಸುಮ್ಮನಿರುತ್ತಾರೆ. ಹೆಣ್ಣುಮಕ್ಕಳನ್ನೂ ಕ್ರೀಡೆಗಳಿಗೆ ಪ್ರೋತ್ಸಾಹಿಸಿ ಅವರನ್ನು ಕೂಡಾ ಓಟ, ಚೆಂಡು ಎಸೆತ, ಜಿಗಿತ ಮುಂತಾದ ಚಟುವಟಿಕೆಗಳಲ್ಲಿ ಕ್ರಿಯಾಶೀಲರಾಗುವಂತೆ ಮಾಡುವ ಛಲವಿಟ್ಟುಕೊಂಡ ಅಧ್ಯಾಪಕರು ಬೆರಳೆಣಿಕೆಯ ಸಂಖ್ಯೆಯಲ್ಲೂ ಸಿಗುವುದು ಕಷ್ಟ. ಇನ್ನೊಂದು ಸಮಸ್ಯೆಯೆಂದರೆ ಹೆಣ್ಣುಮಕ್ಕಳಿಗೆ ಸ್ವತಃ ಆಸಕ್ತಿಯಿದ್ದು ಅವರು ತಮ್ಮ ಸ್ವಪ್ರಯತ್ನದಿಂದ ಏನನ್ನಾದರೂ ಸಾಧಿಸಿಕೊಂಡರೂ ಅವರು ಮುಂದೆ ಹೋಗಲು ಕೆಲವೊಮ್ಮೆ ಗುರು-ಹಿರಿಯರು ಒಪ್ಪುವುದಿಲ್ಲ. ಅಂತರ್ಶಾಲಾ ಮಟ್ಟದ ಆಟೋಟ ಸ್ಪರ್ಧೆಗಳಲ್ಲೋ ಅಥವಾ ಜಿಲ್ಲಾ ಮತ್ತು ರಾಜ್ಯಮಟ್ಟದ ಪಂದ್ಯಾಟಗಳಲ್ಲೋ ಭಾಗವಹಿಸಿ ಜಯ ಗಳಿಸುವ ಸಾಮರ್ಥ್ಯವುಳ್ಳ ಎಷ್ಟೋ ಹೆಣ್ಣುಮಕ್ಕಳ ಪ್ರತಿಭೆಗಳು ಅವಕಾಶ ಸಿಗದೆ ಕಮರುವ ಸಂದರ್ಭಗಳು ಹಲವು.

ಕೆಲವು ಅಧ್ಯಾಪಕರು ಕಾಮುಕರೂ ಸ್ತ್ರೀಲೋಲುಪರೂ ಆಗಿರುತ್ತಾರೆ. ಪ್ರಾಥಮಿಕ ಶಾಲೆಯ ಮಟ್ಟದಲ್ಲೇ 'ಎಳೆಯ ಹುಡುಗಿಯ ಮೇಲೆ ಶಿಕ್ಷಕನಿಂದ ಅತ್ಯಾಚಾರ'ದ ಕೇಸುಗಳನ್ನು ನಾವು ಸಾಕಷ್ಟು ಪತ್ರಿಕೆಗಳಲ್ಲಿ ಓದುತ್ತೇವೆ. ಆರು-ಏಳನೇ ತರಗತಿಗಳಲ್ಲಿ ಆಗತಾನೇ ಯೌವನ ಅರಳುತ್ತಿರುವ ಹೆಣ್ಣು ಮಕ್ಕಳನ್ನು ಅನಾವಶ್ಯಕವಾಗಿ ಮುಟ್ಟುತ್ತ, ಕೆನ್ನೆ ಹಿಂಡುತ್ತ ಸೊಂಟ-ಭುಜಗಳನ್ನು ಹಿಡಿಯುತ್ತ ಗುಪ್ತವಾಗಿ ಆನಂದ ಅನುಭವಿಸುವ ಅಧ್ಯಾಪಕರೂ ಇರುತ್ತಾರೆ. ಹೆಣ್ಣುಮಕ್ಕಳು ಒಂಟಿಯಾಗಿ ಸಿಕ್ಕಾಗ ಅವರ ಅಜ್ಞಾನ-ಮುಗ್ಧತೆಗಳನ್ನು ಬಳಸಿಕೊಂಡು ಲೈಂಗಿಕವಾಗಿ

ಪ್ರಚೋದಿಸಿ, ಹಣದ ಆಮಿಷ, ಅಥವಾ ಅಂಕಗಳ ಆಮಿಷ ತೋರಿಸಿ, ಅಥವಾ ಹೆದರಿಸಿ-ಗದರಿಸಿ ತಮ್ಮ ಅಧಿಕಾರದ ದುರುಪಯೋಗ ಮಾಡಿಕೊಳ್ಳುವ ಮಂದಿಯೂ ಇದ್ದಾರೆ. ಇಂತಹ ಕಿರುಕುಳಗಳಿಂದಾಗಿ ಹೆಣ್ಣುಮಕ್ಕಳಿಗೆ ಶಾಲೆಯ ವಾತಾವರಣದ ಬಗ್ಗೆಯೇ ಜಿಗುಪ್ಸೆ ಬಂದು ಅವರ ಕಲಿಯುವಿಕೆಯ ಮಟ್ಟವೂ ಕುಸಿಯುವ ಅಪಾಯದಲ್ಲಿ ಅವರು ಸಿಲುಕುತ್ತಾರೆ.

ಪಾಠ ಪುಸ್ತಕಗಳಲ್ಲೂ ಲಿಂಗತಾರತಮ್ಯವು ಎದ್ದುಕಾಣುತ್ತದೆ. 'ಇವನು ಬಸವ-ಇವಳು ಕಮಲ, ಬಸವ ಅಪ್ಪನ ಜೊತೆಗೆ ಪೇಟೆಗೆ ಹೋಗುತ್ತಾನೆ, ಕಮಲ ಅಮ್ಮನಿಗೆ ಮನೆಗೆಲಸದಲ್ಲಿ ನೆರವಾಗುತ್ತಾಳೆ' ಎನ್ನುವುದರ ಮೂಲಕ ಪಠ್ಯಪುಸ್ತಕವು ಹೆಣ್ಣಿನ ಮೇಲೆ ಪರಂಪರೆಯು ಈಗಾಗಲೇ ವಿಧಿಸಿದ ಶಿಕ್ಷೆಯನ್ನು ಒಪ್ಪಿಕೊಂಡು ಆ ಪೂರ್ವಾಗ್ರಹವು ಮುಂದುವರಿಯುವಂತೆ ಮಾಡುತ್ತದೆ. ಅಪ್ಪನ ಚಿತ್ರ ಬಂದಾಗ ಆತ ಹಾಯಾಗಿ ಕುರ್ಚಿಯ ಮೇಲೆ ಕುಳಿತು ಪತ್ರಿಕೆಗಳನ್ನೋದುತ್ತ ಇದ್ದರೆ ಅಮ್ಮನ ಚಿತ್ರದಲ್ಲಿ ಆಕೆ ಒಲೆಯ ಬುಡದಲ್ಲಿ ಅಡಿಗೆ ಮಾಡುತ್ತಲೋ, ಅಥವಾ ತಟ್ಟೆ ಮುಂದೆ ನಿಂತು ಬಡಿಸುತ್ತಲೋ ಇರುತ್ತಾಳೆ. ಹೆಣ್ಣುಮಕ್ಕಳಿಗೆ ಅವರು ತೊಳೆದ ಲೋಟಗಳ ಸಂಖ್ಯೆಯ ಮೂಲಕ ಲೆಕ್ಕ ಮಾಡಲು ಕಲಿಸಿದರೆ ಗಂಡುಮಕ್ಕಳಿಗೆ ಅದೇ ವಿಷಯವನ್ನು ಅವರು ಹೊಡೆದ ಗೋಲಿಗಳ ಸಂಖ್ಯೆಯ ಮೂಲಕ ಕಲಿಸಲಾಗುತ್ತದೆ. ಇವತ್ತು ಜಾಗೃತಗೊಂಡ ಮಹಿಳೆಯರು ಮುಖ್ಯವಾಗಿ ಪ್ರತಿಭಟಿಸುವುದು ಇಂತಹ ಅಸಮತೋಲನವನ್ನೇ ಆಗಿದೆ. ಗಂಡುಮಕ್ಕಳಿಗೆ ಎಳವೆಯಿಂದಲೇ ಮನೆಯಲ್ಲಿ ರಾಜಮರ್ಯಾದೆಯಾದರೆ ಹೆಣ್ಣುಮಕ್ಕಳು ಸದಾಕಾಲ ಒಂದಲ್ಲ ಒಂದು ಕೆಲಸ ಮಾಡುತ್ತ ಇರಬೇಕಾಗುತ್ತದೆ. ದೊಡ್ಡವರಾಗಿ ಕುಟುಂಬದಲ್ಲಿ ನೆಲೆಯೂರಿದ ನಂತರವೂ ಗಂಡಸರು ಆಫೀಸಿನಲ್ಲೋ, ಅಂಗಡಿ-ಫ್ಯಾಕ್ಟರಿಗಳಲ್ಲೋ ಅಥವಾ ತೋಟ ಗದ್ದೆಗಳಲ್ಲೋ ಹೆಚ್ಚೆಂದರೆ ಬೆಳಿಗ್ಗೆ 8 ಗಂಟೆಯಿಂದ ಸಾಯಂಕಾಲ 6 ಗಂಟೆಯವರೆಗೆ ದುಡಿದರೆ ಅವರ ಗೃಹಿಣಿಯರು ಬೆಳಿಗ್ಗೆ 5 ಗಂಟೆಗೇ ಎದ್ದು ದಿನವಿಡೀ ದುಡಿದು ರಾತ್ರಿ ಹತ್ತಾದರೂ ಬಿಡುಗಡೆ ಸಿಗದೆ ನರಳುತ್ತಾರೆ. ಇನ್ನು ಉದ್ಯೋಗಸ್ಥ ಮಹಿಳೆಯರ ಪರಿಸ್ಥಿತಿ ದೇವರಿಗೇ ಪ್ರೀತಿ. ಹೀಗಿದ್ದರೂ ಗಂಡನಾದವನು ತಾನು ಗಂಡು ಎಂಬ ಒಂದೇ ಕಾರಣಕ್ಕೆ ತಾನು ದುಡಿದು ಸಂಪಾದಿಸುವವನೆಂದು ಅಹಂಕಾರ ಪಡುತ್ತ ಹೆಂಡತಿಯ ಮೇಲೆ ಅಧಿಕಾರ ಚಲಾಯಿಸುತ್ತಾನೆ. ಆಕೆಯನ್ನು 'ಸಾಕು'ವವನು ತಾನು, ಆದ್ದರಿಂದ ಆಕೆ ತಾನು ಹಾಕಿದ ಗೆರೆಯನ್ನು ದಾಟಕೂಡದು ಎನ್ನುತ್ತಾನೆ. ಆತನ ಇಚ್ಛೆಗೆ ವಿರುದ್ಧ ಹೋದರೆ ಆಕೆಗೆ ಉಳಿಗಾಲವಿಲ್ಲ. ಆದರೆ ಒಂದು ಕುಟುಂಬದ ಸರ್ವತೋಮುಖ ಬೆಳವಣಿಗೆಗೆ ಬಹುದೊಡ್ಡ ದೇಣಿಗೆಯನ್ನು ನೀಡುವ ಹೆಣ್ಣಿನ ಸ್ಥಿತಿ ಹೀಗೇಕೆ ಆಗಬೇಕು ಎಂಬುದರ ಬಗ್ಗೆ ನಾವು ಇನ್ನಾದರೂ ಯೋಚಿಸಬೇಕಾಗಿದೆ. ಈ ಕಾರಣದಿಂದಾಗಿಯೇ ಇಂದು ಮಹಿಳಾ ಸ್ವಾಯತ್ತ ಸಂಘಟನೆಗಳು ಹೆಂಗಸರು ಮಾಡುವ ಮನೆಗೆಲಸಕ್ಕೂ ಮಾನ್ಯತೆ ಸಿಗಬೇಕು ಎಂಬ ಬೇಡಿಕೆಯನ್ನು ಸರಕಾರದ ಮುಂದಿಟ್ಟಿವೆ. ಮಾತ್ರವಲ್ಲದೆ ಮನೆಗೆಲಸವೆಂಬುದು ಹೆಣ್ಣಿಗೆ ಮಾತ್ರ ಸೀಮಿತವಾಗಿರಬೇಕೆಂದೇನೂ ಇಲ್ಲ. ಗರ್ಭ ಧರಿಸಿ ಮಕ್ಕಳನ್ನು ಹೆರುವ ಕೆಲಸವು ಹೆಣ್ಣಿಗೆ ಸೇರಿದ್ದೆಂದು ಪ್ರಕೃತಿಯೇ ನಿರ್ಧರಿಸಿದೆ ನಿಜ. ಆದರೆ ಮನೆಗೆಲಸ ಮತ್ತು ಮಕ್ಕಳ ಪೋಷಣೆಯ ಹೊಣೆಗಾರಿಕೆಯು ಗಂಡ-ಹೆಂಡತಿಯರಿಬ್ಬರೂ ಸಮಾನವಾಗಿ ಸೇರಿದುದರಿಂದ ಗಂಡ ಕೂಡಾ ಪರಂಪರೆಯು ಹೆಣ್ಣಿನದೆಂದು ಹೇಳುವ ಕೆಲಸಗಳಲ್ಲಿ ಸಮಪಾಲು ತೆಗೆದುಕೊಳ್ಳುವುದು ನ್ಯಾಯಯುತವಾಗಿ ಆತನ ಕರ್ತವ್ಯವಾಗಿದೆ. ಸ್ತ್ರೀವಾದಿ ಚಿಂತನೆಯು ಇಷ್ಟೆಲ್ಲ ಪ್ರಗತಿಪರ ಹೆಜ್ಜೆಗಳನ್ನು ಇಡುತ್ತಿರುವ ಇಂದಿನ ಸಂದರ್ಭದಲ್ಲಿ ನಮ್ಮ ಪಾಠ ಪುಸ್ತಕಗಳಲ್ಲಿ ಮಾತ್ರ ಅರ್ಥಹೀನ ಸಂಪ್ರದಾಯಗಳಿಗೆ ಒತ್ತುನೀಡಿ ಲಿಂಗ ತಾರತಮ್ಯ ತೋರಿಸುವುದು ಹಾಸ್ಯಾಸ್ಪದವಲ್ಲವೇ? ಖಂಡಿತ ವಾಗಿಯೂ ಹೆಣ್ಣು ಮಕ್ಕಳ ಭವಿಷ್ಯ ಮದುವೆಗೋ ಮಕ್ಕಳನ್ನು ಹೇರುವುದಕ್ಕೋ ಅಥವಾ ಅಡಿಗೆ ಮನೆಯ ಕೆಲಸಗಳಿಗೋ ಸೀಮಿತವಾಗಿರಬೇಕೆಂದಿಲ್ಲ. ಒಳ್ಳೆಯ ವಿದ್ಯಾಭ್ಯಾಸ ಪಡೆದು ಉನ್ನತ ಸ್ಥಾನಕ್ಕೇರಿ ಜವಾಬ್ದಾರಿಯುತಳಾಗಿ ಕರ್ತವ್ಯ ನಿರ್ವಹಿಸಿ ಸಮಾಜದ ಒಬ್ಬ ಉತ್ತಮ ಪ್ರಜೆಯೆಂದು ತೋರಿಸಿಕೊಡುವ ಪ್ರತಿಭೆ - ಸಾಮರ್ಥ್ಯಗಳು ಅವರಲ್ಲೂ ಇರಬಹುದು. ಗಂಡು ಗಂಡಾದ ಮಾತ್ರಕ್ಕೆ ಮನೆಯೊಳಗಿನ ಕೆಲಸಗಳನ್ನು ಶ್ರದ್ಧೆವಹಿಸಿ ಮಾಡಬಾರದೆಂದೇನೂ ಇಲ್ಲ. ಹೆಣ್ಣು ಮನೆಯ ಹೊರಗೆ ಬಂದು ಗಂಡಿಗೆ ಸಮನಾಗಿ ನಿಂತು ಕೆಲಸ ಮಾಡಲು ಹೊರಟಿರುವಾಗ ಮನೆಯೊಳಗಿನ ಕೆಲಸದ ಜವಾಬ್ದಾರಿ ಆತನದೂ ಆಗಿರುತ್ತದೆ.

ಮೀಸಲಾತಿ ಯೋಜನೆಯನ್ನು ಬಹಳ ಹಿಂದಿನಿಂದಲೇ ಸರಕಾರವು ಜಾರಿ ಮಾಡಿರುವ ಹಿನ್ನೆಲೆಯಲ್ಲಿ ದಲಿತ ವರ್ಗದ ಹೆಣ್ಣುಮಕ್ಕಳಿಗೆ ಹಾಸ್ಟೆಲು ಸೌಕರ್ಯವನ್ನು ಕಲ್ಪಿಸಿಕೊಟ್ಟಿದೆ. ಬಡತನದ ಕಾರಣದಿಂದಲೇ ಹೆಣ್ಣುಮಕ್ಕಳ ವಿದ್ಯಾಭ್ಯಾಸವನ್ನು ತಂದೆ-ತಾಯಿಗಳು ಮೊಟಕುಗೊಳಿಸುವುದನ್ನು ತಡೆಗಟ್ಟುವುದು ಇದರ ಉದ್ದೇಶ. ಆದರೆ ಈ ಹಾಸ್ಟೆಲುಗಳಲ್ಲೂ ಹೆಣ್ಣುಮಕ್ಕಳು ಯಾವ ರೀತಿಯ ಮಾನಸಿಕ ಹಾಗೂ ದೈಹಿಕಯಾತನೆಗೆ ಗುರಿಯಾಗುತ್ತಾರೆಂದರೆ ಎಷ್ಟೋ ಬಾರಿ ಅದರ ಪರಿಣಾಮವಾಗಿ ಆತ್ಮಹತ್ಯೆಗಳೂ ಸಂಭವಿಸುತ್ತವೆ. ಹೆಣ್ಣುಮಕ್ಕಳಿಗೆ ವಿದ್ಯಾಭ್ಯಾಸ

ಕೊಡಿಸುವುದು ಅಪ್ರಯೋಜನಕವೆಂಬ ಪೂರ್ವಾಗ್ರಹದಿಂದಾಗಿ ಹಾಸ್ಟೆಲಿನ ಮೇಲ್ವಿಚಾರಕಿಯರು ಅವರಿಗೆ ಸರಿಯಾಗಿ ಊಟ-ತಿಂಡಿ ಕೊಡದೆ, ಅವರಿಂದ ಮಿತಿಮೀರಿ ಕೆಲಸ ಮಾಡಿಸುವುದು, ಸಣ್ಣಪುಟ್ಟ ತಪ್ಪುಗಳಿಗೂ ಬೈಯುವುದು, ಹೊಡೆಯುವುದು, ಹೀಗಳೆಯುವುದು-ಮುಂತಾದ ರೀತಿಯಲ್ಲಿ ಹಿಂಸೆಕೊಟ್ಟು ಅವರು ಮಾನಸಿಕ ಅಸ್ವಸ್ಥತೆಗೆ ಗುರಿಯಾಗುವಂತೆ ಮಾಡಲಾಗುತ್ತದೆ. ಮೀಸಲಾತಿಯ ಹೆಸರಿನಲ್ಲಿ ಕಲಿಯುವ ಹೆಣ್ಣುಮಕ್ಕಳಿಗೆ ಸರಕಾರದಿಂದ ಸಿಗುವ ಹಣ ಹಾಗೂ ಇತರ ಸೌಲಭ್ಯಗಳನ್ನು ಒಳಗೆ ಹಾಕಿಕೊಳ್ಳುವ ಉದ್ದೇಶದಿಂದ ಮೇಲಧಿಕಾರಿಗಳು ಹಾಸ್ಟೆಲಿನ ಮೇಲ್ವಿಚಾರಕಿಯರನ್ನು ಅಸಹಾಯಕತೆಯಲ್ಲಿ ಸಿಲುಕಿಸಿ ಅದರ ಲಾಭವನ್ನು ತಾವು ಪಡೆದುಕೊಳ್ಳುತ್ತಾರೆ. ಆದರೆ ಇದರ ಪರಿಣಾಮವಾಗಿ ಶೋಷಣೆಗೆ ಒಳಗಾಗುವವರು ಎಳೆಯ ಹೆಣ್ಣುಮಕ್ಕಳು.

ಶಾಲೆಯಲ್ಲಿ ಕಲಿಯುವ ಹಂತದಲ್ಲಿ ಮಕ್ಕಳ ಮನಸ್ಸು ಹೂವಿನಂತೆ ಕೋಮಲವಾಗಿರುತ್ತದೆ. ಹೊಸದನ್ನು ಕಲಿಯುವ ಹುಮ್ಮಸ್ಸು ತುಂಬಿರುವ ವಯಸ್ಸು ಅದು: ಆಗ ಅವರನ್ನು ಹೆಣ್ಣುಮಕ್ಕಳೆಂಬ ಕಾರಣಕ್ಕೆ ಬೈದು ಭಂಗಿಸಿ ಬಾಯಿ ಮುಚ್ಚಿಸಿದರೆ ಅವರ ಮೃದು ಹೃದಯಗಳಿಗೆ ಸಹಿಸಲಾರದ ಆಘಾತವಾಗುತ್ತದೆ. ಅಲ್ಲದೆ ಇದರಿಂದುಂಟಾಗುವ ಕೀಳರಿಮೆಯಿಂದ ಬಳಲಿ ಅವರು ಮಾನಸಿಕ ಅಸ್ವಸ್ಥತೆಗೆ ಗುರಿಯಾದಾಗ ಅದು ಅವರ ಓದಿನ ಮೇಲೆ ದುಷ್ಪರಿಣಾಮ ಬೀರುತ್ತದೆ. ಈ ರೀತಿ ಲಿಂಗ ತಾರತಮ್ಯ ತೋರಿಸುವವರು ಪುರುಷ ಅಧ್ಯಾಪಕರು ಮಾತ್ರ ಆಗಿರುವುದಿಲ್ಲ. ಮಹಿಳೆಯರು ಕೂಡಾ ತಾವು ಸುಶಿಕ್ಷಿತರಾದರೂ ಸಮಾಜದಲ್ಲಿ ತಮಗಾಗುತ್ತಿರುವ ಅನ್ಯಾಯಗಳ ಅರಿವೇ ಅವರಿಗಿರುವುದಿಲ್ಲ. ಅಸಮಾನತೆ-ಅಸಮತೋಲನಗಳಿಗೆ ಅವರು ಎಷ್ಟರಮಟ್ಟಿಗೆ ಹೊಂದಿಕೊಂಡಿರುತ್ತಾರೆಂದರೆ ಆಗುತ್ತಿರುವ ಅನ್ಯಾಯಗಳು ಅವರಿಗೆ ವಿಶೇಷವಾಗಿ ಕಾಣಿಸುವುದೇ ಇಲ್ಲ. ಪುತ್ರ ಸಂತಾನದ ವಿನಃ ಮುಕ್ತಿಯಿಲ್ಲವೆಂದು ನಂಬುವ ಮಹಿಳೆಯರು ಈ ವೈಜ್ಞಾನಿಕ ಯುಗದಲ್ಲಿ ಇನ್ನೂ ಇದ್ದಾರೆಂಬುದು ವಿಚಿತ್ರವಾದರೂ ಸತ್ಯದ ಸಂಗತಿ. ಈ ಕಾರಣದಿಂದಲೇ ಗರ್ಭಿಣಿಯಾದ ಕೂಡಲೇ ಪ್ರತಿಯೊಬ್ಬರೂ ಗಂಡು ಮಗುವಾಗಲಿ ಎಂದು ಹಾರೈಸುತ್ತಾರೆ. ಗರ್ಭದಲ್ಲಿರುವ ಶಿಶು ಹೆಣ್ಣೆಂದು ತಿಳಿದಾಗ ಅವರ ಉತ್ಸಾಹವೆಲ್ಲ ಇಳಿದುಹೋಗುತ್ತದೆ. ಗರ್ಭಿಣಿಯ ಆರೈಕೆ ತನ್ನಿಂತಾನೇ ಕೆಳಮಟ್ಟಕ್ಕಿಳಿಯುತ್ತದೆ. ಆಕೆಗೆ ಕೊಡುವ ಪೌಷ್ಟಿಕ ಆಹಾರಗಳ ಪ್ರಮಾಣ ಕಡಿಮೆಯಾಗುತ್ತದೆ. ಗರ್ಭದಲ್ಲೇ ಪ್ರಾರಂಭವಾಗುವ ಹೆಣ್ಣುಮಗುವಿನ ಅವಗಣನೆ ಹೊರಗೆ ಬಂದನಂತರ ಜೀವನದುದ್ದಕ್ಕೂ ಮುಂದುವರಿಯುತ್ತದೆ. ವಿದ್ಯಾವಂತ ಮಹಿಳೆಯರೇ ತಮ್ಮ ತಪ್ಪನ್ನು ಅರಿತು ತಿದ್ದಿಕೊಳ್ಳದಿರುವುದು ಇಂದಿನ ಬಹುದೊಡ್ಡ ವಿಪರ್ಯಾಸ.

ಇಂತಹ ಅಹಿತಕರ ವಾತಾವರಣ ನಿರ್ಮಾಣವಾಗಲು ಇನ್ನಾದರೂ ನಾವು ಬಿಡಬಾರದು. ಈಗ ನಾವು ವರ್ಷಕ್ಕೊಂದು ಬಾರಿ ವಿಶ್ವಮಹಿಳಾ ದಿನವನ್ನು ಆಚರಿಸುತ್ತೇವೆ. ಸ್ತ್ರೀವಾದಿ ಚಳವಳಿ ಪ್ರಾರಂಭವಾಗಿ ಶತಮಾನಗಳೇ ಸಂದಿವೆ. ಈ ಹೋರಾಟವು ನಡೆದು ಬಂದಿರುವ ದಾರಿ ಮತ್ತು ಮಾಡಿರುವ ಸಾಧನೆಗಳ ಬಗ್ಗೆ ಪ್ರತಿಯೊಬ್ಬ ಮಹಿಳೆಯೂ ತಿಳಿದುಕೊಳ್ಳುವಂತಾಗಬೇಕು. ಪತ್ರಿಕೆ-ಪುಸ್ತಕಗಳನ್ನು ಓದುವ ಪರಿಪಾಠವಿಟ್ಟುಕೊಂಡು ಲಿಂಗತಾರತಮ್ಯದಿಂದಾಗಿ ನಮ್ಮ ಸುತ್ತಮುತ್ತ ನಡೆಯುವ ಅನಾಹುತಗಳ ಬಗ್ಗೆ ತಿಳಿಯಲು ಪ್ರಯತ್ನಿಸಬೇಕು. ಆತ್ಮಜಾಗೃತಿಯೆಂಬುದು ಮೊದಲು ಮೂಡಬೇಕಾದುದು ಮಹಿಳೆಯರಲ್ಲಿ. ಭಾರತೀಯ ಸಂಸ್ಕೃತಿಯಲ್ಲಿ ಹೆಣ್ಣನ್ನು ಪೂಜ್ಯಳೆಂದೂ, ಮಾತೆಯೆಂದೂ ಗೌರವದಿಂದ ಕಾಣುತ್ತಾರೆನ್ನುವುದು ತಾತ್ವಿಕ ನೆಲೆಯಲ್ಲಿ ಮಾತ್ರವೇ ಹೊರತು ವಾಸ್ತವದಲ್ಲಿ ಅಲ್ಲ ಎಂಬ ಸತ್ಯವನ್ನು ಮಹಿಳೆಯರು ಅರಿತು ಕೊಳ್ಳಬೇಕು. ಈ ಅರಿವು ಪ್ರಾಯಶಃ ಈಗತಾನೇ ಬಿರಿಯುತ್ತಿರುವ ಮೊಗ್ಗುಗಳನ್ನು ಸಮರ್ಥವಾಗಿ ಅರಳಿಸುವಲ್ಲಿ ನಮಗೆ ಸಹಾಯಕ ವಾಗಬಲ್ಲದು. ಶಾಲೆಯಲ್ಲಿ ಕಲಿಸುವ ಅಧ್ಯಾಪಕ-ಅಧ್ಯಾಪಿಕೆ ಯರೆಲ್ಲರೂ ಹೆಣ್ಣುಮಕ್ಕಳಲ್ಲಿರುವ ಕೀಳರಿಮೆಯನ್ನು ಬೇರುಸಹಿತ ಕಿತ್ತೊಗೆದು, ಅವರಲ್ಲಿ ಧೈರ್ಯ ಮತ್ತು ಆತ್ಮವಿಶ್ವಾಸಗಳನ್ನು ತುಂಬಿಸಿ, ಅವರಿಗೆ ತಮ್ಮಲ್ಲಿ ಅಡಗಿರುವ ಸುಪ್ತಶಕ್ತಿಯ ಅರಿವು ಮೂಡುವಂತೆ ಮಾಡಲು ಶ್ರಮಿಸಬೇಕು. ವಿನಾಕಾರಣ ಅವರನ್ನು ಬೈಯದೆ, ಲಿಂಗ ತಾರತಮ್ಯ ತೋರಿಸದೆ ಅಧ್ಯಯನ ಹಾಗೂ ಇತರ ಚಟುವಟಿಕೆಗಳಲ್ಲಿ ತೊಡಗುವಂತೆ ಪ್ರೇರೇಪಿಸಬೇಕು. ಹೀಗೆ ಮಾಡಿದರೆ ಮಾತ್ರ ಹಲವು ವರ್ಷಗಳ ನಂತರ, ನಮ್ಮ ಮುಂದಿನ ಜನಾಂಗದಲ್ಲಾದರೂ ಸ್ತ್ರೀ ಪುರುಷರು ಅನ್ಯೋನ್ಯತೆಯಿಂದ, ಪರಸ್ಪರ ಪ್ರೀತಿ-ಗೌರವಗಳಿಂದ, ಸೌಹಾರ್ದಯುತ ಸಹಬಾಳ್ವೆ ನಡೆಸಿ ಒಂದು ಆರೋಗ್ಯಪೂರ್ಣ ಸಮಾಜದ ಸೃಷ್ಟಿಗೆ ಕಾರಣರಾಗಬಲ್ಲರು.

●

# 'ಲೈಂಗಿಕ ದೌರ್ಜನ್ಯ' ಕಾಲ್ಪನಿಕತೆ ಹಾಗೂ ವಾಸ್ತವತೆ

ಮೂಲ : *ಡಾ|| ಫ್ಯಾಕ್ಟ್ಸ್ ಯಂಡ್ ಮಿಥ್ಸ್*
ಕನ್ನಡಕ್ಕೆ : *ಡಾ|| ವಸುಂಧರಾ ಭೂಪತಿ*

ಮಹಿಳೆಯರ ಮೇಲೆ ನಡೆಯುತ್ತಿರುವ ಹಲವಾರು ಅಪರಾಧಗಳಲ್ಲಿ ಕೌಟುಂಬಿಕ ದೌರ್ಜನ್ಯ, ಲೈಂಗಿಕ ಹಲ್ಲೆ ಮತ್ತು ಅತ್ಯಾಚಾರಗಳು ಪ್ರಮುಖವಾದವುಗಳು. ರಾಷ್ಟ್ರೀಯ ಹಾಗೂ ಅಂತರಾಷ್ಟ್ರೀಯ ಸಭೆಗಳಲ್ಲಿ ಮಹಿಳಾ ಚಳುವಳಿಗಳು ಲಿಂಗಾಧಾರಿತ ದೌರ್ಜನ್ಯದ ವಿರುದ್ಧ ಪ್ರಶ್ನೆಯೆತ್ತಿವೆ. ಬಾಹ್ಯವಾಗಿ ಕಾಣದಿದ್ದ ವಿವಿಧ ರೂಪಗಳಲ್ಲಿದ್ದ ಇಂತಹ ದೌರ್ಜನ್ಯಗಳು ಈಗ ಸಾರ್ವಜನಿಕವಾಗಿವೆ. ಇವುಗಳ ವ್ಯಾಪ್ತಿ ಲೈಂಗಿಕ ಕಿರುಕುಳದಿಂದ ಲೈಂಗಿಕ ಸಂಬಂಧದವರೆಗೆ ಮತ್ತು ಪುಟ್ಟಮಕ್ಕಳ ಮೇಲಿನ ಲೈಂಗಿಕ ಹಲ್ಲೆಯಿಂದ ಸೈಬರ್ ಸೆಕ್ಸ್‌ವರೆಗೆ ಇದೆ. ಮುಂಚೆ 'ಸಾಮಾಜಿಕ ಪಿಡುಗು' ಎಂದು ಭಾವಿಸಲಾಗುತ್ತಿದ್ದ ವೇಶ್ಯಾವೃತ್ತಿ ಹೆಣ್ಣನ್ನು ಕೇವಲ ಲೈಂಗಿಕ ಮಾರಾಟದ ವಸ್ತುವಾಗಿ ಮಾತ್ರವಲ್ಲದೇ ಅದು ಕೂಡ ಹಿಂಸೆಯ ಒಂದು ಭಾಗವೇ ಆಗಿದೆ. ಹಲವಾರು ಮಹಿಳೆಯರನ್ನು ಕಡ್ಡಾಯವಾಗಿ ಅವರ ಇಷ್ಟಕ್ಕೆ ವಿರುದ್ಧವಾಗಿ ವೇಶ್ಯಾವೃತ್ತಿಗೆ ಎಳೆಯಲಾಗುತ್ತಿದೆ. ಕೆಲವು ಅಭಿವೃದ್ಧಿ ಯೋಜನೆಯಗಳು ಉದಾ: NEP, SAPಮತ್ತು ಆರ್ಥಿಕ ಜಾಗತೀಕರಣಗಳು ಮಹಿಳೆಯರ ಮೇಲೆ ಪ್ರತಿಕೂಲ ಪರಿಣಾಮಗಳನ್ನುಂಟು ಮಾಡುತ್ತವೆ. 'ವಿಶ್ವ ವ್ಯಾಪಾರ' ಮತ್ತು 'ಉದಾರೀಕರಣ'ದಂತಹ ನೀತಿಗಳು ಬಡ ಮಹಿಳೆಯರ ಜೀವನದ ಹಕ್ಕನ್ನು ಕಸಿದುಕೊಳ್ಳುವುದಲ್ಲದೇ ಅವರ ಜೀವನಶೈಲಿಯನ್ನು ದುಬಾರಿಗೊಳಿಸಿವೆ. ಇನ್‌ಫಾರ್ಮಲ್ ವರ್ಕಿಂಗ್ ಗ್ರೂಪ್ ಹೇಳಿದೆ "ವಿಶ್ವ ವ್ಯಾಪಾರ ಸಂಘಟನೆಯ ನೀತಿಯಾದ ವ್ಯಾಪಾರಿ ಉದಾರೀಕರಣವು ಮಹಿಳೆಯರ ಆರ್ಥಿಕ ಸ್ಥಾನಮಾನದ ಜೊತೆ ಬಹಳಷ್ಟು ರಾಜಿ ಮಾಡುವುದರ ಜೊತೆಗೆ ಬಂಡವಾಳ ಆಧಾರಿತ ನೀತಿಯನ್ನು ಸ್ಪರ್ಧಾತ್ಮಕವಾದ ಮಾರುಕಟ್ಟೆಯಲ್ಲಿ ಹೆಚ್ಚಿಸಿದ್ದರಿಂದ ಅಂತರಾಷ್ಟ್ರೀಯ ವ್ಯಾಪಾರದಲ್ಲಿ ಮಹಿಳೆಯರ ಭಾಗವಹಿಸುವಿಕೆ ಅತ್ಯಂತ ಕಡಿಮೆಯಾಯಿತು."

ಪ್ರಪಂಚದಾದ್ಯಂತ ಅಂಗೀಕರಿಸಲ್ಪಟ್ಟ ಲಿಂಗ ದೌರ್ಜನ್ಯವು ಭಾರತೀಯ ನ್ಯಾಯಾಂಗ ವ್ಯವಸ್ಥೆಯು ಅಧಿಕೃತವಾಗಿ ಮಾನ್ಯ ಮಾಡಲ್ಪಟ್ಟಿದೆ. ವಿಶಾಖ ಮತ್ತು ರಾಜಸ್ಥಾನ ರಾಜ್ಯದ ನಡುವಿನ ದಾವೆಯಲ್ಲಿ ಸರ್ವೋಚ್ಚ ನ್ಯಾಯಾಲಯವು ತನ್ನ ಪ್ರಮುಖವಾದ ತೀರ್ಪಿನಲ್ಲಿ ಲೈಂಗಿಕ ದೌರ್ಜನ್ಯಗಳ ಬಗ್ಗೆ ದೇಶದ ಇತಿಹಾಸದಲ್ಲಿ ಮೊಟ್ಟ ಮೊದಲ ಬಾರಿಗೆ ಇಂತಹ ದೌರ್ಜನ್ಯವನ್ನು ಮಾನವ ಹಕ್ಕುಗಳ ಉಲ್ಲಂಘನೆಯೆಂದು ಹೇಳಿದೆಯಲ್ಲದೇ ಅಂತರಾಷ್ಟ್ರೀಯ ಒಡಂಬಡಿಕೆಗಳನ್ನು ಮಾನ್ಯ ಮಾಡುತ್ತ ಇಂತ ದೌರ್ಜನ್ಯಗಳನ್ನು ಪಿಡುಗುಗಳನ್ನು ತಡೆಗಟ್ಟಲು ಮಹಿಳೆಯರನ್ನು ರಕ್ಷಿಸಲು ದೇಶೀಯ ಸಾಮಾನ್ಯ ಕಾನೂನಿನಲ್ಲಿ ಅವಕಾಶವಿಲ್ಲದಿದ್ದಲ್ಲಿ ಅತ್ಯಂತ ಪರಿಣಾಮಕಾರಿಯಾದ ಕಾರ್ಯಕ್ರಮವನ್ನು ಜಾರಿ ಮಾಡಿ ಲೈಂಗಿಕ ದೌರ್ಜನ್ಯದ ಪಿಡುಗನ್ನು ಕೆಲಸ ಮಾಡುವ ಮಹಿಳೆಯರ ಎಲ್ಲ ಜಾಗಗಳಲ್ಲಿ ತಡೆಯುವುದು ಜರೂರಾದ ಕ್ರಮವೆಂದು ತಿಳಿಸಿದೆ. ಸರ್ವೋಚ್ಚ ನ್ಯಾಯಾಲಯವು 14-8-1997ರಂದು ಲೈಂಗಿಕ ದೌರ್ಜನ್ಯವನ್ನು ನಿಷೇಧಿಸಿ ನೀತಿ ನಿರೂಪಣೆಯನ್ನು ಜಾರಿಗೊಳಿಸಿದೆ. 13-2-2000ರಂದು ಇಂಡಿಯನ್ ಎಕ್ಸ್‌ಪ್ರೆಸ್ ತನ್ನ ವರದಿಯಲ್ಲಿ ನ್ಯಾಯಾಧೀಶರು ಹೇಳಿರುವಂತೆ ಯಾವುದೇ ಅಂತರಾಷ್ಟ್ರೀಯ ಒಡಂಬಡಿಕೆಯು ನಮ್ಮ ಸಂವಿಧಾನದ ಸ್ಫೂರ್ತಿ ಮತ್ತು ನಿಬಂಧನೆಗಳಿಗೆ ಹೊಂದದಿದ್ದಲ್ಲಿ ನಾವು ಅದರ ಅರ್ಥ ಮತ್ತು ತಾತ್ಪರ್ಯವನ್ನು ಒಳಗೊಂಡಂತೆ ಪ್ರಸ್ತುತ ಜಾರಿಯಲ್ಲಿರುವ ಕಾನೂನಿನ ಪ್ರಕಾರ ಅಳವಡಿಸಿ ಅರ್ಥೈಸಬೇಕೆಂದು ತಿಳಿಸಿದೆ.

ವಿವಿಧ ರೂಪದ ಲೈಂಗಿಕ ಹಿಂಸೆಯು ವಿವಿಧ ಸಾಮಾಜಿಕ ಸಂಸ್ಥೆಗಳಿಂದ ಸ್ಪಷ್ಟವಾಗಿ ಬೆಳೆದಿದೆಯಲ್ಲದೇ ಅದನ್ನು ಪುನರುತ್ಪತ್ತಿ ಮತ್ತು ನಿರಂತರ ಕ್ರಿಯೆಯಾಗಿಸಿದೆ. ಅದಲ್ಲದೇ ಲೈಂಗಿಕ ಭೇದವು ಎಲ್ಲ ವಯಸ್ಸಿನ ಮಹಿಳೆಯರ ವಿರುದ್ಧ ನಡೆಯುವ ಹಿಂಸೆಯು ಸಂಕೀರ್ಣ ಸಂಗತಿ. ಇದು ಭ್ರೂಣಾವಸ್ಥೆಯಲ್ಲಿದ್ದಾಗಿನಿಂದಲೇ ಪ್ರಾರಂಭವಾಗುತ್ತದೆ. ಅಮ್ನಿಯೋಸಿಂಥೆಸಿಸ್, ತಾಯಿಯ ಗರ್ಭದಲ್ಲಿದ್ದಾಗಲೇ ಬೇಡದ ಹೆಣ್ಣು ಭ್ರೂಣವನ್ನು ಕೊಲ್ಲುವುದಕ್ಕೋಸ್ಕರ ಮಾಡುವ ಪರೀಕ್ಷೆ. ಜನಗಣತಿಯ ಪ್ರಕಾರ ದಶಕ, ದಶಕಗಳ ನಂತರವೂ ಹೆಣ್ಣು ಶಿಶುಹತ್ಯೆಯ ಸಂಖ್ಯೆ ಹೆಚ್ಚುತ್ತಲೇ ಇದೆ.

ಮಹಿಳೆಯರು ತಮ್ಮ ಜೀವನದ ಯೋಗ್ಯ ದಾರಿಯನ್ನು ಕಂಡುಕೊಳ್ಳಲು ಸಮರ್ಥರಿದ್ದರೂ ಅವರನ್ನು ನಾಲ್ಕು ಗೋಡೆಗಳ ಮಧ್ಯೆ ಅಧಿಕಾರ ರಹಿತರನ್ನಾಗಿ ಮಾಡಿ ಅವರ ಮೇಲೆ ಲೈಂಗಿಕ ದೌರ್ಜನ್ಯಗಳನ್ನು ನಡೆಸಲಾಗುತ್ತದೆ. ಇದೊಂದು ವಿಶ್ವಾಸಘಾತಕ ಕ್ರಿಯೆ. ಕಾರಣವೇನೆಂದರೆ ಲೈಂಗಿಕ ಕ್ರಿಯೆಯು ಸಾಮಾನ್ಯವಾಗಿ

ಸಂತೋಷದ ಮತ್ತು ಸಂಪರ್ಕದ ಮೂಲಕ್ರಿಯೆಯಾಗಿದೆ. ಇನ್ನಿತರ ಎಲ್ಲ ಹಿಂಸೆಗಳ ರೀತಿಯಲ್ಲಿ ಲೈಂಗಿಕ ಹಿಂಸೆಯನ್ನು ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಸಂಬಂಧಗಳ ಹಿನ್ನೆಲೆಯ ದೃಷ್ಟಿಯಿಂದ ನೋಡಬೇಕಾಗುತ್ತದೆ. ಇದರ ಬೇರುಗಳು ಜಾತಿ, ವರ್ಗ ಮತ್ತು ಶ್ರೇಣೀಕೃತ ಸಮಾಜ ರಚನೆಯಲ್ಲಿವೆ ಮತ್ತು ಪುರುಷ ಪ್ರಧಾನ ಸಮಾಜವೇ ಇದಕ್ಕೆ ಹೊಣೆಯಾಗಿದೆ. ಮಹಿಳೆಯರು ವರ್ಣಪದ್ಧತಿ ಹಾಗೂ ಪುರೋಹಿತಶಾಹಿ ಧಾರ್ಮಿಕ ಹಿನ್ನೆಲೆಯ ಜಾತಿ ವ್ಯವಸ್ಥೆಯ ರೂಪದಲ್ಲಿ ಸಿಲುಕಿದ್ದಾರೆ. ದಲಿತ ಮಹಿಳೆಯರು ಇನ್ನು ಹೆಚ್ಚಿನ ತುಳಿತಕ್ಕೆ ಒಳಗಾಗಿ ಅಸ್ಪೃಶ್ಯತೆಯನ್ನು ಅನುಭವಿಸುತ್ತಿದ್ದಾರೆ.

ಸ್ತ್ರೀವಾದಿ ಅಧ್ಯಯನಗಳು ಸ್ತ್ರೀ-ಪುರುಷರ ನಡುವಿನ ಅಸಮಾನತೆಗಳಿಂದಾಗಿಯೇ ಲಿಂಗಾಧಾರಿತ ಹಿಂಸೆಗಳು ಹೆಚ್ಚಾಗಿರುವುದನ್ನು ಖಚಿತಪಡಿಸುತ್ತವೆ ಮತ್ತು ಇದರ ಬೇರುಗಳನ್ನು ಪತ್ತೆ ಹಚ್ಚಿರುವ ಪ್ರಕಾರ 1) ಶೋಷಣಾತ್ಮಕ ಉತ್ಪಾದನಾ ಸಂಬಂಧಗಳು (ಮಾರ್ಕ್ಸ್‌ವಾದಿ ಸಿದ್ಧಾಂತ) 2) ಪುರುಷರು ಮತ್ತು ಮಹಿಳೆಯರ ನಡುವಿನ ಮೂಲಭೂತ ಭಿನ್ನತೆಗಳು (ಕ್ರಾಂತಿಕಾರಿ ಸ್ತ್ರೀವಾದಿ ಅಧ್ಯಯನ) 3) ಬಂಡವಾಳಶಾಹಿ ಮತ್ತು ಪುರೋಹಿತಶಾಹಿ ನಡುವಿನ ಸಂಬಂಧ (ಸಮಾಜವಾದಿ-ಸ್ತ್ರೀವಾದಿ ಅಧ್ಯಯನ ಸಂಸ್ಥೆ) 4) ಜಾತಿ ಹಾಗೂ ವರ್ಗಗಳ ಸಂಬಂಧ (ಮಾರ್ಕ್ಸ್‌ವಾದಿ-ಫುಲೆ ಅಂಬೇಡ್ಕರ್‌ವಾದಿ ಪ್ರವೃತ್ತಿ)

ವಿಶೇಷವಾಗಿ ಮಹಿಳೆಯರ ಮೇಲಿನ ಹಿಂಸೆಯು ಭೌಗೋಳಿಕ-ರಾಜಕೀಯ ಗಡಿಗಳನ್ನು ದಾಟಿ ಎಲ್ಲ ಸಂಸ್ಕೃತಿಗಳಲ್ಲಿಯೂ ಸೇರಿಹೋಗಿದೆ ಮತ್ತು ಸಮಾಜದ ಎಲ್ಲ ಸ್ತರಗಳಲ್ಲಿಯೂ ಹೆಣೆದುಕೊಂಡಿರುವುದು ಏಲ್ಲಿಯವರೆಗೆಂದರೆ 1) ಅನೇಕ ಮಹಿಳೆಯರು ತಮ್ಮನ್ನು ತಾವೇ ದೂಷಿಸಿಕೊಳ್ಳುತ್ತಾರೆ 2) ಅಂತಹ ಅಪರಾಧ ಮಾಡಿದ ತಪ್ಪಿತಸ್ತರು ಸಮಾಜದ ಶಕ್ತಿಸಾಮರ್ಥ್ಯದ ಮೂಲಕ ಇಂತಹ ಹಿಂಸೆಯನ್ನು "ದುರಾದೃಷ್ಟ" ಎಂದು ಸಮರ್ಥಿಸಿಕೊಳ್ಳುತ್ತಾರೆ. ಆಶ್ಚರ್ಯದ ಸಂಗತಿಯೆಂದರೆ ವ್ಯವಸ್ಥೆಯೂ ಇದಕ್ಕೆ ಶಾಮೀಲಾಗುತ್ತದೆ. ಉದಾ: ಪೊಲೀಸ್, ವೈದ್ಯಕೀಯ ಹಾಗೂ ಅರೆ ವೈದ್ಯಕೀಯ ವೃತ್ತಿಯಲ್ಲಿರುವವರು ಮಹಿಳೆಯರ ಮೇಲಿನ ದೌರ್ಜನ್ಯವನ್ನು ಹಾಗೂ ಇದೊಂದು ಆರೋಗ್ಯದ ಗಂಭೀರ ಸಮಸ್ಯೆ ಎಂದು ಗುರುತಿಸುವಲ್ಲಿ ವಿಫಲರಾಗುತ್ತಾರೆ. ಇದು ಮಹಿಳೆಯರ ಮೂಲಭೂತ ಮಾನವ ಹಕ್ಕುಗಳ ನಿರಾಕರಣವಾಗುತ್ತದೆ.

ಲೈಂಗಿಕ ಹಿಂಸೆಯು ಮನುಷ್ಯನಲ್ಲಿ ಆಳವಾಗಿ ಬೇರೂರಿರುವ ಭಯದ ಹಾಗೂ ಪುರೋಹಿತಶಾಹಿಯಿಂದ ಉದ್ಭವಿಸಿವ ವಿವಾಹ ದ್ವೇಷದ ಅಭಿವ್ಯಕ್ತಿಯಾಗಿದೆ.

ಮಾರ್ಚ್ 1989ರಲ್ಲಿ ನ್ಯಾಯಮೂರ್ತಿ ಜ. ಪಿ. ಸಿನ್ಹಾರವರು ಬಿಹಾರ್‌ದ ಪಸೇರಿಯಾ ಹಳ್ಳಿಯ ಆದಿವಾಸಿ ಮಹಿಳೆಯರ ಮೇಲೆ ಸಾಮೂಹಿಕ ಅತ್ಯಾಚಾರ ನಡೆಸಿದ ಆರೋಪದ ಮೇಲೆ ಬಂಧಿತರಾದ 14 ಜನ ಪೊಲೀಸರನ್ನು ಖುಲಾಸೆ ಮಾಡಿದರು. ಡಿಫೆನ್ಸ್ ಕೌನ್ಸಿಲ್‌ನ ವಾದವೇನೆಂದರೆ ಈ ಆದಿವಾಸಿ ಮಹಿಳೆಯರನ್ನು ಸಮಾಜದ ಇನ್ನಿತರ ಗೌರವಾನ್ವಿತ ಮಹಿಳೆಯರೊಂದಿಗೆ ಸಮಾನವಾಗಿ ಕಾಣಲಾಗದು. ತೀರ್ಪಿನಲ್ಲಿ ಅವರು ತಿಳಿಸಿದ್ದೇನೆಂದರೆ "ಈ ಮಹಿಳೆಯರು ರೂ. 1,000 ಕ್ಕೋಸ್ಕರ ಸುಳ್ಳು ಹೇಳುವುದಕ್ಕೂ ಸಿದ್ಧರು. ಏಕೆಂದರೆ ಅವರಿಗೆ ಹಣದ ಅವಶ್ಯಕತೆ ಬಹಳ ಇರುತ್ತದೆ."

ಇತ್ತೀಚೆಗೆ ದೆಹಲಿಯಲ್ಲಿರುವ 'ಸಾಕ್ಷಿ'ಯಿಂದ ಪ್ರಕಟಿಸಲಾದ ನ್ಯಾಯವಾದಿಗಳ ತೀರ್ಪುಗಳೆಲ್ಲವೂ ಲಿಂಗಾಧಾರಿತವಾಗಿದ್ದವು.

* ಶೇಕಡಾ 74 ಭಾಗ ನ್ಯಾಯಮೂರ್ತಿಗಳು ನಂಬಿರುವುದೇನೆಂದರೆ ಗಂಡಂದಿರಿಗೆ ಹೆಂಡತಿಯರನ್ನು ಶಿಕ್ಷಿಸಲು ನ್ಯಾಯಸಮ್ಮತ ಕಾರಣಗಳಿರುತ್ತವೆ.
* ಶೇಕಡಾ 64 ಭಾಗ ಅವರ ಅನುಭವದ ಪ್ರಕಾರ ಮಹಿಳೆಯರೂ ಕೂಡ ಹಿಂಸೆಗೆ ಸ್ವಲ್ಪಮಟ್ಟಿಗೆ ಕಾರಣರಾಗಿರುತ್ತಾರೆ.
* ಮಹಿಳೆಯರ ಉಡುಪು ಮತ್ತು ನಡತೆ, "ಮುನ್ನೆಚ್ಚರಿಕೆ ತೆಗೆದುಕೊಳ್ಳುವುದರಲ್ಲಿ ವಿಫಲರಾಗುವುದು" ಮತ್ತು ಅವಳು "ಉದ್ರೇಕಕಾರಿ" ಸ್ವಭಾವ ಕೂಡಾ ಪುರುಷರಲ್ಲಿ ದೌರ್ಜನ್ಯ ಹೆಚ್ಚಿಸುವುದಕ್ಕೆ ಕಾರಣವಾಗಿರುತ್ತದೆ.
* ಶೇಕಡಾ 37 ಮಹಿಳೆಯರು ಪತಿಯ ವಿರುದ್ಧ ಮೊಕದ್ದಮೆ ಹೂಡಲು ನಿರಾಕರಿಸುತ್ತಾರೆ. 1) ಆರ್ಥಿಕ ಅಡಚಣೆ ಮತ್ತು ನಿಖರವಾದ ಮಾಹಿತಿಯ ಕೊರತೆ 2) ಶೇಕಡಾ 27 ಭಾಗ ಕೌಟುಂಬಿಕ ಒತ್ತಡದ ಕಾರಣದಿಂದ 3) ಶೇಕಡಾ 14 ಭಾಗ ನಾಚಿಕೆ ಮತ್ತು ಅಪಮಾನದಿಂದ 4) ಶೇಕಡಾ 7 ಭಯದಿಂದಾಗಿ.
* ಶೇಕಡಾ 55 ಮಹಿಳೆಯರು ಮೊಕದ್ದಮೆಯ ವಿಚಾರಣೆಯ ಸಮಯದಲ್ಲಿ ನ್ಯಾಯಮೂರ್ತಿಗಳಿಂದ ನಕಾರಾತ್ಮಕ ಹಾಗೂ ಪಕ್ಷಪಾತ ಧೋರಣೆಯನ್ನು ಅನುಭವಿಸುತ್ತಾರೆ. ನ್ಯಾಯಮೂರ್ತಿಗಳು ತಮ್ಮನ್ನು ಹಾಗೂ ತಮ್ಮ ವಿರೋಧಿ ಪುರುಷರನ್ನು ನಡೆಸಿಕೊಳ್ಳುವ ವಿಧಾನವೂ ವಿಭಿನ್ನವಾಗಿರುತ್ತದೆಂದು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.
* ಶೇಕಡಾ 64 ರಷ್ಟು ಮಹಿಳಾ ವಕೀಲರು ಪುರುಷ ಸಹೋದ್ಯೋಗಿಗಳಿಂದ ದೌರ್ಜನ್ಯಕ್ಕೊಳಗಾಗಿರುತ್ತಾರೆ.

ಡಿಸೆಂಬರ್ 6, 1989ರಂದು ಕೆನಡಾದ ಮಾಂಟ್ರಿಯಲ್‌ನಲ್ಲಿ 14 ಇಂಜಿನಿಯರಿಂಗ್ ವಿದ್ಯಾರ್ಥಿನಿಯರನ್ನು 25 ವರ್ಷದ ವಿದ್ಯಾರ್ಥಿಯೊಬ್ಬ ತಾನು ಕಾಲೇಜಿಗೆ ಆಯ್ಕೆಯಾಗದಿದ್ದುದಕ್ಕೆ ಅವರೇ ಜವಾಬ್ದಾರಿಯೆಂದು ಹತ್ಯೆಗೈದ. ಅವನು ಆತ್ಮಹತ್ಯೆ ಮಾಡಿಕೊಳ್ಳುವ ಮುಂಚೆ ಬರೆದಿಟ್ಟಿದ್ದ ಪತ್ರದಲ್ಲಿ 'ಸ್ತ್ರೀವಾದಿ'ಗಳನ್ನು ತೀವ್ರವಾಗಿ ಖಂಡಿಸಿದ್ದ.

*ಲೈಂಗಿಕ ಕಿರುಕುಳ:* ಸಹೋದ್ಯೋಗಿ, ಮ್ಯಾನೇಜರ್ ಅಥವಾ ಮಹಿಳೆಯರ ಮೇಲೆ ಅಧಿಕಾರವುಳ್ಳ ಯಾವುದೇ ಪುರುಷನು ತನ್ನೆಡೆಗೆ ಲೈಂಗಿಕ ಗಮನ ಕೊಡಬೇಕೆಂದು ಮಹಿಳೆಗೆ ತೊಂದರೆ ಕೊಟ್ಟರೆ ಅದು ಲೈಂಗಿಕ ಕಿರುಕುಳ ಎನಿಸಿಕೊಳ್ಳುತ್ತದೆ. ಲೈಂಗಿಕಾಸಕ್ತಿಯಿಂದ ಸ್ಪರ್ಶಿಸುವುದು, ಹಾವಭಾವಗಳನ್ನು ಪ್ರದರ್ಶಿಸುವುದು, ಲೈಂಗಿಕವಾಗಿ ಮಹಿಳೆಗೆ ಇಷ್ಟವಾಗದಿರುವ ಏನನ್ನಾದರೂ ಮಾತಾಡುವುದು ಹಾಗೂ ತನ್ನೊಡನೆ ಲೈಂಗಿಕ ಸಂಬಂಧ ಬೆಳೆಸಲು ಕೋರುವುದು ಮುಂತಾದವುಗಳೆಲ್ಲ ಲೈಂಗಿಕ ಕಿರುಕುಳ ಎನಿಸಿಕೊಳ್ಳುತ್ತವೆ. ಪ್ರತಿಯೊಬ್ಬ ಮಹಿಳೆಯು ಲೈಂಗಿಕ ಶೋಷಣೆಯ ಅಪಾಯದಲ್ಲಿದ್ದಾಳೆ. ಅವಳು ಯಾವ ರಾಷ್ಟ್ರದಲ್ಲಿ ಅಥವಾ ಯಾವ ಸಂಸ್ಥೆ ಅಥವಾ ಯಾವ ಕಾರ್ಖಾನೆಯಲ್ಲಿ ಕೆಲಸ ಮಾಡುತ್ತಿದ್ದಾಳೆಂಬುದನ್ನು ಅವಲಂಬಿಸಿಲ್ಲ.

*ಕಾಲ್ಪನಿಕತೆ:* ಲೈಂಗಿಕ ಕಿರುಕುಳವು ಅಪರೂಪದ್ದು.

*ವಾಸ್ತವತೆ:* ಅನೇಕ ವರದಿಗಳು ಹಾಗೂ ಅಧ್ಯಯನಗಳ ಪ್ರಕಾರ ಲೈಂಗಿಕ ಕಿರುಕುಳಗಳು ಅತ್ಯಧಿಕವಾಗಿ ಎಲ್ಲೆಡೆಯೂ ಹರಡಿರುವಂತಹುದಾಗಿದ್ದರೂ ವರದಿಯಾಗದೇ ಉಳಿದಿದೆ. ಇಂಡಿಯನ್ ಪೀನಲ್ ಕೋಡ್ (IPC) ಸೆಕ್ಷನ್ 509ರ ಪ್ರಕಾರ ಲೈಂಗಿಕ ಕಿರುಕುಳದ ವಿರುದ್ಧ ಕಾನೂನು ಕ್ರಮ ಜರುಗಿಸಬಹುದಾದರೂ ಕೆಲವೇ ಕೆಲವು ಮೊಕದ್ದಮೆಗಳು ದಾಖಲಾಗಿವೆ; ಬಹಳಷ್ಟು ಮೊಕದ್ದಮೆಗಳು ಸಾಕ್ಷ್ಯಾಧಾರವಿಲ್ಲದೇ ವಜಾ ಮಾಡಲ್ಪಟ್ಟಿವೆ. ರೂಪಂ ಬಜಾಜ್ ಡಿಯೆಲ್, ಸೀನಿಯರ್ ಐ.ಎ.ಎಸ್. (IAS) ಅಧಿಕಾರಿ, ಡಿ.ಐ.ಜಿ. ಕೆ.ಪಿ.ಎಸ್. ಗಿಲ್‌ರ ವಿರುದ್ಧ ಮೊಕದ್ದಮೆ ಹೂಡಿದ್ದರ ಬಗ್ಗೆ ಎಲ್ಲರಿಗೂ ತಿಳಿದಿದೆ. ಆದರೆ ಅವರ ಮೇಲೆ ಸರ್ಕಾರವು ಯಾವುದೇ ರೀತಿಯ ಕ್ರಮ ತೆಗೆದುಕೊಳ್ಳುವಲ್ಲಿ ವಿಫಲವಾಯಿತು ಮತ್ತು ಹೈಕೋರ್ಟ್ ಮೊಕದ್ದಮೆಯನ್ನು ವಜಾ ಮಾಡಿತು.

* ಐ.ಎಲ್.ಓ. ವರದಿಯ ಪ್ರಕಾರ ಶೇಕಡಾ 60 ಭಾಗ ವೃತ್ತಿಯಲ್ಲಿರುವ ಮಹಿಳೆಯರು ಮತ್ತು ಶೇಕಡಾ 55 ಭಾಗ ಕಾಲೇಜುಗಳಲ್ಲಿ ಹಾಗೂ ವಿಶ್ವವಿದ್ಯಾಲಯಗಳಲ್ಲಿ ಅಧ್ಯಯನ ನಡೆಸುತ್ತಿರುವ ವಿದ್ಯಾರ್ಥಿನಿಯರು ಲೈಂಗಿಕ ಕಿರುಕುಳಕ್ಕೆ ಒಳಗಾಗುತ್ತಾರೆ.
* ಔಟ್‌ಲುಕ್ ಪತ್ರಿಕೆ (19-4-2000) ಎರಡು ಸಮೀಕ್ಷೆ ನಡೆಸಿತು. ಲೈಂಗಿಕ ಕಿರುಕುಳದ ಮೇಲೆ ರಾಷ್ಟ್ರೀಯ ಮಹಿಳಾ ಆಯೋಗ ಐದು ರಾಜ್ಯಗಳಲ್ಲಿ ಸಮೀಕ್ಷೆ ನಡೆಸಿದಾಗ ಶೇಕಡಾ 68 ಭಾಗ ಮಹಿಳೆಯರು ಲೈಂಗಿಕ ದೌರ್ಜನ್ಯಕ್ಕೀಡಾಗಿದ್ದರು. ಶೇಕಡಾ 26 ಭಾಗ ದೈಹಿಕ ಹಿಂಸೆ ಅನುಭವಿಸಿದ್ದರು ಹಾಗೂ ಶೇಕಡಾ 33 ಭಾಗ ಲಿಂಗ ಭೇದದಿಂದಾಗಿ ಕಿರುಕುಳಕ್ಕೆ ಒಳಗಾಗಿದ್ದರು. ದೆಹಲಿಯ ಸಾಕ್ಷಿ 1999 ಮಾರ್ಚ್‌ನಲ್ಲಿ ಅಧ್ಯಯನ ನಡೆಸಿದಾಗ ಶೇಕಡಾ 72 ಭಾಗ ಮಹಿಳೆಯರು ಹಾಗೂ ಶೇಕಡಾ 74 ಪುರುಷರು ಲೈಂಗಿಕ ಕಿರುಕುಳದ ಬಗ್ಗೆ ಕೇಳಿದ್ದರು ಇಲ್ಲವೇ ಅನುಭವಿಸಿದ್ದರು.
* ಕೊನೆಯದಾಗಿ ಫ್ರಿ ಪ್ರೆಸ್ ಜರ್ನಲ್‌ನ (2-2-2000) ವರದಿಯಲ್ಲಿ 1-2-2000ರಂದು ಜನತಾ ದಳ ನಾಯಕರಾದ ಡಾ|| ಎ. ಎನ್. ನಾಡಾರ್, ಸೀನಿಯರ್ ಐ.ಎ.ಎಸ್. ಅಧಿಕಾರಿ ನಳಿನಿ ನೆಟ್ಟೋರೊಂದಿಗೆ ದುರ್ನಡತೆ ತೋರಿದ್ದುದಾಗಿ ತಿಳಿಸಿತ್ತು. ಈ ಮೊಕದ್ದಮೆಯ ತೀರ್ಪು ಇನ್ನೂ ಹೊರಬಂದಿಲ್ಲ.

*ಕಾಲ್ಪನಿಕತೆ:* ಲೈಂಗಿಕ ಕಿರುಕುಳದ ಘಟನೆಗಳು ಉತ್ಪ್ರೇಕ್ಷೆಯಿಂದ ಕೂಡಿರುತ್ತವೆ. ಬಹಳಷ್ಟು ಇಂತಹ ಘಟನೆಗಳು ನಿಜವಾಗಿಯು ಕ್ಷುಲ್ಲಕ ಹಾಗೂ ಹಾನಿಕರವಲ್ಲದ ಪ್ರಣಯ ಸಂಬಂಧಗಳಿಂದ ಉಂಟಾಗಿರುತ್ತವೆ.

*ವಾಸ್ತವತೆ:* ಲೈಂಗಿಕ ಕಿರುಕುಳಗಳನ್ನು ಧ್ವಂಸ ಮಾಡಬೇಕು. ಅಧ್ಯಯನಗಳ ಪ್ರಕಾರ ಹಲವಾರು ಕಿರುಕುಳಗಳು 'ಪ್ರಣಯ ಸಂಬಂಧ'ಗಳಿಗಾಗಲಿ ಅಥವಾ ಪ್ರಾಮಾಣಿಕ ಲೈಂಗಿಕ ಅಥವಾ ಸಾಮಾಜಿಕ ಆಸಕ್ತಿಗೆ ಸಂಬಂಧಿಸಿರುವುದಿಲ್ಲ. ಅದಕ್ಕೆ ಬದಲಾಗಿ ಇದು ಮಹಿಳೆಯರಿಗೆ ಅವಮಾನ ಪಡಿಸುವಂತಹುದು, ಹೆದರಿಕೆ ಹುಟ್ಟಿಸುವಂತವು ಮತ್ತು ಜಿಗುಪ್ಸೆ ಹುಟ್ಟಿಸುವಂತವಾಗಿರುತ್ತದೆ. ಸಂಶೋಧನೆಗಳು ತಿಳಿಸುವುದೇನೆಂದರೆ ಲೈಂಗಿಕ ಕಿರುಕುಳವನ್ನು ಭರಿಸಲಾಗದೇ ಮಹಿಳೆಯರು ಶಾಲೆ ಬಿಡಬೇಕಾಗುತ್ತದೆ ಅಥವಾ ನೌಕರಿಯನ್ನೇ ಕಳೆದುಕೊಳ್ಳುತ್ತಾರೆ. ಅನೇಕ ಮಹಿಳೆಯರು ಇದರಿಂದ ಮಾನಸಿಕ ಹಾಗೂ ದೈಹಿಕ ಸಮಸ್ಯೆಗಳಿಗೆ ಗುರಿಯಾಗುತ್ತಾರೆ.

*ಕಾಲ್ಪನಿಕತೆ:* ಅನೇಕ ಮಹಿಳೆಯರು ತಮ್ಮ ಸಹೋದ್ಯೋಗಿ ಅಥವಾ ಮೇಲಧಿಕಾರಿಗಳು ಅಥವಾ ಯಾರ ಮೇಲೆ ತಮಗೆ

ಕೋಪವಿರುವುದೋ ಅವರ ಮೇಲೆ ಸೇಡು ತೀರಿಸಿಕೊಳ್ಳಲು ಲೈಂಗಿಕ ಕಿರುಕುಳದ ಘಟನೆಗಳನ್ನು ಹೆಣೆಯುತ್ತಾರೆ.

*ವಾಸ್ತವತೆ :* ಸಂಶೋಧನೆ ತಿಳಿಸುವುದೇನೆಂದರೆ ಕೇವಲ ಶೇಕಡಾ ಒಂದು ಭಾಗ ಮಾತ್ರ ಸುಳ್ಳು ದೂರುಗಳಾಗಿರುತ್ತವೆ. ಮಹಿಳೆಯರಿಗೆ ತಮ್ಮದು ನ್ಯಾಯವಾದದ್ದು ಎನಿಸಿದರು ಕೂಡ ಬಹಳ ಅಪರೂಪವಾಗಿ ದೂರು ನೀಡುತ್ತಾರೆ.

*ಕಾಲ್ಪನಿಕತೆ :* ಲೈಂಗಿಕ ಕಿರುಕುಳವು ಸಹಿಸಬಹುದಾದ ನಡವಳಿಕೆ ಯಿಂದ ಮತ್ತು ಲಘು ಹಾಸ್ಯದಿಂದ ಕೂಡಿರುತ್ತದೆ. ಮಹಿಳೆಯರು ಬಹಳಷ್ಟು ಬಾರಿ ಅದಕ್ಕೆ ಉತ್ಪ್ರೇಕ್ಷಿತ ಪ್ರತಿಕ್ರಿಯೆ ತೋರುತ್ತಾತೆ.

*ವಾಸ್ತವತೆ :* ಲೈಂಗಿಕ ಕಿರುಕುಳವನ್ನು ಅಧಿಕಾರಕ್ಕಾಗಿ ಬಳಸಿಕೊಳ್ಳಲಾಗುತ್ತದೆ. ಪೇಚಾಟಕ್ಕೆ ಸಿಲುಕಿಸಿಯೇ ಅಥವಾ ಹೀನಾಯಗೊಳಿಸಿಯೇ ನಡೆಯುತ್ತದೆ ಇದು ಮನುಷ್ಯರ ನಡುವಿನ ಆರೋಗ್ಯಕರ ಸಂಬಂಧದ ಅಭಿವ್ಯಕ್ತಿಯಲ್ಲ. ಲೈಂಗಿಕ ಕಿರುಕುಳದ ಅನೇಕ ಮೊಕದ್ದಮೆಗಳಲ್ಲಿ ಮಹಿಳೆಯರು ಪುರುಷನ ದೌರ್ಜನಕ್ಕೊಳಗಾಗಿರುತ್ತಾರೆ.

*ಕಾಲ್ಪನಿಕತೆ :* ದುರ್ನಡತೆಯನ್ನು ಅಲಕ್ಷಿಸಿದರೆ ಲೈಂಗಿಕ ಕಿರುಕುಳವೂ ದೂರವಾಗುತ್ತದೆ.

*ವಾಸ್ತವತೆ :* ಖಂಡಿತ ಇಲ್ಲ. ಸಂಶೋಧನೆಯ ಪ್ರಕಾರ ಸುಮ್ಮನೆ ದುರ್ನಡತೆಯನ್ನು ಅಲಕ್ಷಿಸುವುದು ಪರಿಣಾಮ ಬೀರುವುದಿಲ್ಲ. ಕಿರುಕುಳ ನೀಡುವವರು ಸಾಮಾನ್ಯವಾಗಿ ತಮ್ಮ ನಡತೆಯನ್ನು ಬದಲಾಯಿಸಲಾರರು. ಅಂತಹ ನಡತೆಯನ್ನು ಅಲಕ್ಷಿಸುವುದು ಅವರಿಗೆ ಇನ್ನಷ್ಟು ಪ್ರೋತ್ಸಾಹ ನೀಡಿದಂತಾಗುತ್ತದೆ ಇಲ್ಲವೇ ಕ್ಷಮಿಸಿದಂತಾಗುತ್ತದೆ.

*ಕಾಲ್ಪನಿಕತೆ :* ನೀವು ಮೆಚ್ಚಿಕೊಳ್ಳುವ ಯಾವನೇ ಒಬ್ಬನು ಲೈಂಗಿಕ ದೌರ್ಜನ್ಯ ಮಾಡಿಲ್ಲವೆಂದು ಹೇಳುವುದು ಕಷ್ಟ.

*ವಾಸ್ತವ :* ಪುರುಷರು ಸಾಮಾನ್ಯವಾಗಿ ಒಂದಲ್ಲ ಒಂದು ವಿಧವಾಗಿ ಮಹಿಳೆಯರ ಮೇಲೆ ದೌರ್ಜನ್ಯವೆಸಗಿರುವಂತಹವೇ ಆಗಿರುತ್ತಾರೆ. ಮೆಚ್ಚಿಕೊಳ್ಳುವಿಕೆಯನ್ನೂ ಅವರು ಸಕಾರಾತ್ಮಕ ಧೋರಣೆಯಿಂದಲೇ ನೋಡುತ್ತಾರೆ.

ಲೈಂಗಿಕ ದೌರ್ಜನ್ಯವನ್ನು ಹೊರತುಪಡಿಸಿ ಇನ್ನೂ ಕೆಲವು ವಿಧವಾದ ಲೈಂಗಿಕ ಹಲ್ಲೆಗಳಾಗುತ್ತವೆ. ಆದರೆ ಅದನ್ನು ಬಹಳಷ್ಟು ಜನರು ಅತ್ಯಾಚಾರವೆಂದು ಪರಿಗಣಿಸುವುದಿಲ್ಲ. ಉದಾಹರಣೆಗೆ ಜೀವನದಲ್ಲಿನ ಹಲವಾರು ಘಟನೆಗಳಿಂದ ಮಹಿಳೆ ಅವಳಿಗಿಷ್ಟ ವಿಲ್ಲದಿದ್ದರೂ ಲೈಂಗಿಕ ಸಂಬಂಧಕ್ಕೆ ಒಳಗಾಗುತ್ತಾಳೆ. ಇದು ವಿವಾಹ ಸಂಬಂಧದಲ್ಲಿ ಸಂಬಂಧಿಸುತ್ತದೆ. ಕೆಲವು ವಿವಾಹಿತ ಮಹಿಳೆಯರು ಲೈಂಗಿಕ ಸಂಬಂಧವು ಅವರಿಗಿಷ್ಟವಿರಲಿ, ಇಲ್ಲದಿರಲಿ ಅದನ್ನು ಒಂದು ಕರ್ತವ್ಯವೆಂದು ಭಾವಿಸಿರುತ್ತಾರೆ. ಸಮಾಜವು ಈ ತರಹ ಬಲವಂತದ ಲೈಂಗಿಕ ಸಂಬಂಧವನ್ನು ಶಿಕ್ಷಿಸುವುದಿಲ್ಲ. ಇದು ಕೂಡ ತಪ್ಪು.

**2. ವೇಶ್ಯಾವೃತ್ತಿ :**

"ಸಾಮಾಜಿಕ ಪಿಡುಗು" ಎನಿಸಿಕೊಂಡಿರುವ ವೇಶ್ಯಾ ವೃತ್ತಿಯು ಲೈಂಗಿಕ ಹಿಂಸೆಯ ಇನ್ನೊಂದು ರೂಪವೆಂದರೆ ತಪ್ಪಾಗಲಾರದು. ಸಾಮಾನ್ಯವಾಗಿ ಲೈಂಗಿಕತೆಯ ಬಗೆಗಿರುವಂತೆ ವೇಶ್ಯಾವೃತ್ತಿಯೂ ಕೆಲವು ಕಾಲ್ಪನಿಕ ಕಥೆಗಳನ್ನು ಒಳಗೊಂಡಿದೆ. ಅದರಲ್ಲೊಂದು ಕಾಲ್ಪನಿಕತೆಯೆಂದರೆ ಇದು ಸದಾ ಇನ್ನೊಬ್ಬರನ್ನು ಒಳಗೊಂಡಿರುತ್ತದೆ. ತನ್ನ ದೇಹವನ್ನು ಮಾರಿಕೊಳ್ಳುವ ಮಹಿಳೆ ಅವಳು ನಮ್ಮ ತಾಯಿಯಾಗಿರುವುದಿಲ್ಲ. ಆದರೆ ಯಾರೋ ಅನಾಮಧೇಯ 'ಬೇರೆ'ಯವರು, ಅವಳು ನಾವು ಪ್ರೀತಿ ಅಥವಾ ಕಾಳಜಿ ತೋರಿಸುವವರಿಗಿಂತ ಹೆಚ್ಚು ನೋವು ಅನುಭವಿಸುವ ವಳಾಗಿರುತ್ತಾಳೆ. ಅದೇ ವಿಧವಾಗಿ ಲೈಂಗಿಕತೆಯನ್ನು ಕೊಂಡು ಕೊಳ್ಳುವ ಪುರುಷ ಹಾಗೂ ಮಹಿಳೆಯರನ್ನು ಚುಡಾಯಿಸುವುದರಲ್ಲಿ ಮಗ್ನನಾಗಿರುವವ, ನಮ್ಮ ತಂದೆಯಾಗಿರುವುದಿಲ್ಲ, ಅಣ್ಣನಾಗಿರು ವುದಿಲ್ಲ, ಪತಿಯಾಗಿರುವುದಿಲ್ಲ ಅಥವಾ ಗೆಳೆಯರಾಗಿರುವುದಿಲ್ಲ, ಇವರಾರೂ ಅಲ್ಲದ ಮತ್ತೊಬ್ಬ ಅಪರಿಚಿತ ವ್ಯಕ್ತಿಯಾಗಿರುತ್ತಾನೆ ಮತ್ತು ಅವನಾರೆಂದು ಗೊತ್ತಾಗುವುದೂ ಬೇಡವಾಗಿರುತ್ತದೆ. ಇಂತಹ ಮಹಿಳೆಯರು 'ಕೆಂಪು ದೀಪ'ದ ಸ್ಥಳದಲ್ಲಿ ಕೆಲಸ ಮಾಡುತ್ತಿರುತ್ತಾರೆ. ದೇಹ ಮಾರಾಟ ಮಾಡುತ್ತಿರುವ ಮಹಿಳೆಯರದೇ ಒಂದು ಗುಂಪು. ಒಬ್ಬ ವೇಶ್ಯೆ ಅಥವಾ ಸೆಕ್ಸ್ ವರ್ಕರ್ ಒಬ್ಬ ಹರೆಯದ ಹುಡುಗಿಯಾಗಿರಬಹುದು, ಇಲ್ಲವೇ ಮಕ್ಕಳನ್ನು ಹೊಂದಿದ ವಯಸ್ಕ ಮಹಿಳೆಯಾಗಿರಬಹುದು. ಅವಳು ವೇಶ್ಯಾಗೃಹದಲ್ಲಿ ಅಥವಾ ಬೀದಿಯಲ್ಲಿ ತಲೆಹಿಡುಕನೋ ಅಥವಾ ಬಾರ್‌ನಲ್ಲಿಯೇ ಗಿರಾಕಿಗಳಿಗಾಗಿ ಕಾಯುತ್ತಿರಬಹುದು. ಸಾಮಾನ್ಯವಾಗಿ ಈ ಮಹಿಳೆಯರಿಗೆ ಹಣದ ಅವಶ್ಯಕತೆ ಬಹಳಷ್ಟು ಇರುವುದರಿಂದಲೇ ವೇಶ್ಯೆಯರಾಗುತ್ತಾರೆ.

*ಕಾಲ್ಪನಿಕತೆ :* ದುರ್ನಡತೆಯ ಹಾಗೂ ಸೋಮಾರಿ ಮಹಿಳೆಯರು ವೇಶ್ಯಾ ವೃತ್ತಿಗಿಳಿಯುತ್ತಾರೆ.

*ವಾಸ್ತವತೆ :* ಇದಕ್ಕೆ ವಿರೋಧವಾಗಿ ಅನೇಕ ಮಹಿಳೆಯರು ಜೀವನ ನಡೆಸುವುದಕ್ಕೆ, ಹಣ ಸಂಪಾದನೆಗೆ ಬೇರೆ ಇನ್ಯಾವ ದಾರಿಯೂ ಕಾಣದಾಗದೇ ಅನಿವಾರ್ಯವಾಗಿ ಈ ವೃತ್ತಿ ಗಿಳಿಯುತ್ತಾರೆ. ಅವರಿಗೆ ಹಣ ಕೇವಲ ದೈನಂದಿನ ಅವಶ್ಯಕತೆಗಳಿಗೆ

ಮಾತ್ರವಲ್ಲ ಮಕ್ಕಳು ಹಾಗೂ ಕುಟುಂಬದ ಉಳಿವಿಗಾಗಿ, ಸಾಲ ತೀರಿಸುವುದಕ್ಕೆ ಅಥವಾ ಅವಶ್ಯಕ ಔಷಧಿಗಳ ಖರೀದಿಗೆ ಹಾಗೂ ಇನ್ನಿತರ ಅವಶ್ಯಕ ವಸ್ತುಗಳನ್ನು ಖರೀದಿಸಲು ಬೇಕಾಗಿರುತ್ತದೆ.

ಇದು ಹತಾಶೆಯಿಂದ ಉಂಟಾಗುತ್ತದೆ. ಅನೇಕ ಬಾರಿ ಅವರ ನಿಯಂತ್ರಣಕ್ಕೆ ಮೀರಿದ ಪರಿಸ್ಥಿತಿಗಳಿಂದಲೂ ವೇಶ್ಯಾವೃತ್ತಿಗಿಳಿಯಬೇಕಾದ ಅನಿವಾರ್ಯತೆ ಮೂಡುತ್ತದೆ. ಉದಾಹರಣೆ : ಅವಳ ಪತಿ ತೀರಿಹೋಗಿರುತ್ತಾನೆ ಇಲ್ಲವೇ ವಿಚ್ಛೇದನ ನೀಡಿರುತ್ತಾನೆ ಅಥವಾ ಅವಳ ಪತಿ ಇಲ್ಲವೇ ಇನ್ನಿತರ ಕುಟುಂಬದ ಸದಸ್ಯರು ಅವಳ ಮೇಲೇ ಅವಲಂಬಿತರಾಗಿರುತ್ತಾರೆ ಅಥವಾ ಅತ್ಯಾಚಾರಕ್ಕೆ ಒಳಗಾಗಿರುತ್ತಾಳೆ ಅಥವಾ ಮದುವೆಯಿಲ್ಲದೇ ಗರ್ಭಿಣಿಯಾಗಿರುತ್ತಾಳೆ ಮತ್ತು ಅವಳನ್ನು ಯಾರೂ ಮದುವೆಯಾಗಲು ಸಿದ್ಧರಿರುವುದಿಲ್ಲ. ಅವಳಿಗೆ ನೌಕರಿ ಕೊಡಲು ಯಾರೂ ಮುಂದೆ ಬರುವುದಿಲ್ಲ ಅಥವಾ ಹಣ ಸಂಪಾದನೆಗೆ ಬೇರೆ ದಾರಿಯಿರುವುದಿಲ್ಲವೋ ಆಗ ಅವಳು ಬದುಕುಳಿಯುವುದಕ್ಕಾಗಿ ತನ್ನ ಬಳಿಯಿರುವ ಒಂದೇ ಒಂದು ಆಸ್ತಿ ಯಾರೂ ಕಸಿದುಕೊಳ್ಳದಿರುವ ವಂತಾಹುದು, ತನ್ನ ದೇಹವನ್ನು ಮಾರಿಕೊಳ್ಳುತ್ತಾಳೆ.

ಇನ್ನಿತರ ಕೆಲವು ಮಹಿಳೆಯರನ್ನು ಬಲವಂತದಿಂದ ವೇಶ್ಯಾವೃತ್ತಿಗೆ ತಳ್ಳಲಾಗುತ್ತದೆ. ಅನೇಕ ಮಹಿಳೆಯರಿಗೆ ಉತ್ತಮ ನೌಕರಿ ದೊರೆಯುವುದೆಂದೋ ಇಲ್ಲವೇ ಶ್ರೀಮಂತ ಪತಿ ದೊರೆಯುವನೆಂದೋ ನಂಬಿಸಿ ಮಧ್ಯಪೂರ್ವದ ರಾಷ್ಟ್ರಗಳಲ್ಲಿ ಮಾರಾಟ ಮಾಡಲಾಗುತ್ತದೆ. ನಂತರ ಅವರು ಅದರಲ್ಲಿಯೇ ಮುಂದುವರೆದು ದೇಹ ಮಾರುವುದನ್ನು ನಿಲ್ಲಿಸುವುದು ಅಸಾಧ್ಯವಾಗುತ್ತದೆ. ಆ ಮಹಿಳೆಯರು ಹೊಸ ದೇಶದಲ್ಲಿ ಕಾನೂನಿನ ಸಮ್ಮತಿಯಿಲ್ಲದೇ ಇರುತ್ತಾಳಾದ್ದರಿಂದ ಅಲ್ಲಿ ಅವರಿಗೆ ಯಾವುದೇ ಹಕ್ಕುಗಳಿರುವುದಿಲ್ಲ, ಹಣವಿರುವುದಿಲ್ಲ ಮತ್ತು ಅವಳು ಮನೆಗೆ ಮತ್ತು ಕುಟುಂಬಕ್ಕೆ ವಾಪಸ್ಸು ಬರಲು ಯಾವುದೇ ದಾರಿಯಿರುವುದಿಲ್ಲ. ಅಲ್ಲದೇ ಅವಳಿಗೆ ಸಾಲವೂ ಇರಬಹುದು. ಅದನ್ನು ತೀರಿಸಲು ಅಥವಾ ಅವಳ ಮೇಲಾಧಿಕಾರಿ ಊರು ಬಿಟ್ಟು ಹೋಗಬಾರದೆಂದು ಥಳಿಸಬಹುದು. ಇಲ್ಲವೇ ಬ್ಲ್ಯಾಕ್‌ಮೇಲ್ ಮಾಡಬಹುದು. ನಂತಹ ಅವಳು ನಿಧಾನವಾಗಿ ದೇಹ ಮಾರಾಟದ ಗುಲಾಮಳಾಗಿ ಬದಲಾಗುತ್ತಾಳೆ.

**ಕಾಲ್ಪನಿಕತೆ :** ಮಹಿಳೆಯರು ತಾವಾಗಿಯೇ ವೇಶ್ಯಾವೃತ್ತಿಯನ್ನು ಆಯ್ಕೆ ಮಾಡಿಕೊಳ್ಳುತ್ತಾರೆ.

**ವಾಸ್ತವತೆ :** ಇವು ಸಂಪೂರ್ಣ ಸತ್ಯವಲ್ಲ! ಎಲ್ಲರಿಗೂ ತಿಳಿದಿರುವಂತೆ ಮಕ್ಕಳು ದೌರ್ಜನ್ಯದ ಬಲಿಪಶುವಾಗುವುದರಿಂದ (ನಿಂದೆ, ಅತ್ಯಾಚಾರ,) ತಮ್ಮ ವಿವೇಕವನ್ನು ಕಳೆದುಕೊಳ್ಳುತ್ತಾರೆ. ಈ ಅವಿವೇಕತನದಿಂದ ಹಾಗೂ ಬೇರೆ, ಇನ್ನಾವ 'ಆಯ್ಕೆ'ಯೂ ಅವರಿಗಿಲ್ಲದಿರುವಾಗ ಅನಿವಾರ್ಯವಾಗಿ 'ಆಯ್ಕೆ' ಮಾಡಿಕೊಳ್ಳುತ್ತಾರೆ. ಆರ್ಥಿಕ, ಸಾಮಾಜಿಕ ಇಲ್ಲವೇ ಭಾವನಾತ್ಮಕವಾಗಿ ಅತ್ಯಂತ ಕಷ್ಟದ ಪರಿಸ್ಥಿತಿಯಲ್ಲಿರುವ ಮಹಿಳೆಯರಲ್ಲಿ ಕೆಲವೇ ಕೆಲವರು ಮಾತ್ರ ವೇಶ್ಯೆಯರಾಗುತ್ತಾರೆ. ಹೆಚ್ಚಿನವರು ಖಂಡಿತ ಇದನ್ನು ಇಷ್ಟಪಡುವುದಿಲ್ಲ. ಅಲ್ಲದೇ ಎಲ್ಲರಿಗೂ ಗೊತ್ತಿರುವ ಪ್ರಕಾರ ಬಹಳಷ್ಟು ವೇಶ್ಯೆಯರು ದೌರ್ಜನ್ಯಕ್ಕೆ ಬಲಿಯಾದವರೇ ಆಗಿರುತ್ತಾರೆ.

ಇನ್ನೊಂದು ವಿಧದಲ್ಲಿ ದಲಿತ ವರ್ಗದ ಹಾಗೂ ಕಡಿಮೆ ಆದಾಯದ ಮಹಿಳೆಯರಿಗೆ ಇನ್ನಿತರ ದಾರಿಗಳಿಗಿಂತ ವೇಶ್ಯಾವೃತ್ತಿ ಸುಲಭದ ದಾರಿಯೆನಿಸುತ್ತದೆ. ಇನ್ನು ವೇಶ್ಯಾವೃತ್ತಿಯನ್ನೇ ಅವಲಂಬಿಸಿ ಬದುಕುವವರ ಮಕ್ಕಳು ಅನಿವಾರ್ಯತೆಯಿಂದ ಈ ವೃತ್ತಿಗಿಳಿಯುತ್ತಾರೆ. ಆರ್ಥಿಕ ಅಡಚಣೆ ಹಾಗೂ ಬದುಕಿನ ಅಳಿವು-ಉಳಿವಿನ ಪ್ರಶ್ನೆಯಾಗಿರುತ್ತದೆ. ಕೆಲವೊಮ್ಮೆ ಅತ್ಯಾಚಾರ ಮಾಡಿದ ವ್ಯಕ್ತಿಗಳೇ ಅವರನ್ನು ವೇಶ್ಯಾವೃತ್ತಿಗೆ ತಳ್ಳುತ್ತಾರೆ.

**3. ಅಭಿವ್ಯಕ್ತಿ ಸ್ವಾತಂತ್ರ್ಯ :**

ಇತ್ತೀಚೆಗೆ ಬಂದ 'ವಾಟರ್' ಸಿನಿಮಾ ಮತ್ತು ಮುಂಚಿನ 'ಫೈರ್' ಸಿನಿಮಾಗಳ ವಿರುದ್ಧ ನಡೆಯುತ್ತಿರುವ ಚರ್ಚೆಗಳನ್ನು ಗಮನಿಸಿದರೆ ಅವೆಲ್ಲವೂ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಹತ್ತಿಕ್ಕುವಂತಹವುಗಳಾಗಿವೆ. ಇದರಲ್ಲಿ ಅಪಮಾನಿಸುವ ಸಂಭಾಷಣೆಗಳಿದೆಯೆನ್ನುವುದು ಅಂದರೆ ಅಶ್ಲೀಲ ಸಂಭಾಷಣೆ ಮತ್ತು ಅಶ್ಲೀಲ ಸಾಹಿತ್ಯವನ್ನು ಒಳಗೊಂಡಿದೆಯೆಂಬುದು ಕೆಲವರ ಅಭಿಪ್ರಾಯ. ಯಾರೇ ಒಬ್ಬರಿಗೆ ಅಪಮಾನ ಪಡಿಸುವಂತಹ ಎಲ್ಲ ಶಬ್ದಗಳನ್ನು ಮತ್ತು ಕಲ್ಪನೆಯಗಳನ್ನು ಕಾನೂನಿನ ಪ್ರಕಾರ ನಿಷೇಧಿಸಬೇಕೆ? ಎಂಬ ಪ್ರಶ್ನೆ ಏಳುತ್ತದೆ. ಇಂತಹ ಪರಿಸ್ಥಿತಿಯಲ್ಲಿ ಬಹಳಷ್ಟು ಸಂಭಾಷಣೆ, ಬಹಳ ಆಸಕ್ತಿದಾಯಕ ಸಂಭಾಷಣೆ ಕಾನೂನಿನ ವಿರೋಧವಾಗಿಯೇ ಇರುವಂತಹುದಾಗಿರುತ್ತದೆ. ಸಂತಾನೋತ್ಪತ್ತಿಯ ಆಯ್ಕೆಯ ಮೇಲಿನ ಸ್ತ್ರೀವಾದಿ ಸಾಹಿತ್ಯವು ಖಂಡನೆಗೆ ಅವಕಾಶವಿರುತ್ತದೆ. ಕಛೇರಿಯಲ್ಲಿ ಮಹಿಳೆಯು ಗರ್ಭಪಾತದ ಪರವಾದ ಪೋಸ್ಟರ್ ಅಥವಾ ಲೇಖನವನ್ನು ಗೋಡೆಗೆ ಹಾಕಿದರೆ ಅವರ ಸಹೋದ್ಯೋಗಿ ಅದಕ್ಕೆ ಆಕ್ಷೇಪವೆತ್ತಿದರೆ ಸರ್ಕಾರವು ಅದನ್ನು ತೆಗೆಯುವಂತೆ ಬಲವಂತಪಡಿಸಬಹುದೆ?

*ಕಾಲ್ಪನಿಕತೆ :* ಲೈಂಗಿಕ ಸಾಹಿತ್ಯ ಹಾಗೂ ಚಿತ್ರಗಳು ಸಹಜವಾಗಿಯೇ ಮಹಿಳೆಯರಿಗೆ ಹಾನಿಕರ ಮಾತ್ರವಲ್ಲ. ಈ ಎಲ್ಲವೂ ಲೈಂಗಿಕ ದೌರ್ಜನ್ಯಕ್ಕೆ ಎಡೆ ಮಾಡಿಕೊಡುತ್ತವೆ.

*ವಾಸ್ತವತೆ :* ಲೈಂಗಿಕ ದೌರ್ಜನ್ಯವು ಅಶ್ಲೀಲ ಸಂಭಾಷಣೆ ಅಥವಾ ಅಶ್ಲೀಲತೆ ಕಲ್ಪನೆಯ ಮೇಲೆ ಆಧಾರಿತವಾಗಿರುವುದೋ, ಇಲ್ಲವೋ ಆದರೆ ಕಾನೂನಿಗೆ ವಿರೋಧವಂತೂ ಹೌದು. ಮಹಿಳೆಯರು ತಮ್ಮಲ್ಲಿ ತಾವೇ ಲೈಂಗಿಕತೆಯ ಬಗ್ಗೆ ಹಾಸ್ಯ ಮಾಡಿಕೊಳ್ಳುವುದಲ್ಲದೇ ಅದರಿಂದ ಸಂತೋಷ ಪಡುತ್ತಾರೆ. ಲೈಂಗಿಕತೆಯ ಬಗ್ಗೆ ಅಭಿಪ್ರಾಯ ವ್ಯಕ್ತಪಡಿಸುವುದಾಗಲೀ, ಅದರ ಬಗ್ಗೆ ತಿಳುವಳಿಕೆ ಹೊಂದುವುದಾಗಲೀ ಮಹಿಳೆಯರನ್ನು ಅನೈತಿಕತೆಯತ್ತ ಕೊಂಡೊಯ್ಯುತ್ತದೆಂದು, ಆದ್ದರಿಂದ ಅದರ ಬಗ್ಗೆ ಯೋಚಿಸದೇ ಪವಿತ್ರರಾಗಿಯೇ ಉಳಿಯಬೇಕೆಂದು ಪುರುಷರು ಅಪೇಕ್ಷಿಸುತ್ತಾರೆ.

ಕೊನೆಯದಾಗಿ ಲಿಂಗಾಧಾರಿತ ದೌರ್ಜನ್ಯವು (ಅಶ್ಲೀಲ ಭಾಷೆ ಉಪಯೋಗಿಸಲಿ ಅಥವಾ ಇಲ್ಲದಿರಲಿ) ಪ್ರಗತಿ ಹಾಗೂ ಸಮಾನತೆಯತ್ತ ಧಾವಿಸುತ್ತಿರುವ ಮಹಿಳೆಯರ ಮೇಲೆ ಅಧಿಕಾರ ಚಲಾಯಿಸಲು ಪುರುಷರು ಆಡುವ ಅಧಿಕಾರದ ಆಟ. ಇದಕ್ಕೆ ಕಾರಣ ನಮ್ಮಲ್ಲಿ ಆಳವಾಗಿ ಬೇರೂರಿರುವ ಸಾಮಾಜಿಕ ಕಾರಣಗಳು ಹಾಗೂ ಅಧಿಕಾರಶಾಹಿಗಳು. ಪ್ರಪಂಚದಲ್ಲಿ ಏಷ್ಯಾ ಸೇರಿದಂತೆ ವಿವಿಧ ಭಾಗಗಳಲ್ಲಿ ನಡೆಸಿದ ಸಂಶೋಧನೆಯು ಲೈಂಗಿಕ ಸಾಹಿತ್ಯ ಮತ್ತು ದೌರ್ಜನ್ಯದ ನಡುವೆ ಉದ್ದೇಶಿತ ಸಂಬಂಧವಿರುವುದನ್ನು ತೋರಿಸುತ್ತಿಲ್ಲ. ಹಿಂಸೆಯಿಂದ ಕೂಡಿದ ಲೈಂಗಿಕ ಸಾಹಿತ್ಯದ ಮೇಲಿನ ಅಧ್ಯಯನಗಳು ಅಸಂಬದ್ಧವಾಗಿವೆ. ಕೆಲವು ಪ್ರಯೋಗಶಾಲೆಯಲ್ಲಿ ಕಂಡರು, ಇನ್ನು ಕೆಲವರು ಕಾಣಲಿಲ್ಲ. ಸಂಶೋಧನೆಯಿಂದ ತಿಳಿದುಬರುವುದೇನೆಂದರೆ ಹೃದಯದ ಬಡಿತ ಹೆಚ್ಚುವುದು, ಲಿಡ್ರಿನಾಲಿನ್ ಸ್ರಾವ ಹೆಚ್ಚುವುದು ಮುಂತಾದವುಗಳು ಕೇವಲ ಹಿಂಸಾತ್ಮಕ ಸಿನಿಮಾಗಳಿಂದ ಮಾತ್ರವಲ್ಲ ಸೈಕಲ್ ಓಡಿಸುವುದರಿಂದಲೂ ಉಂಟಾಗುತ್ತದೆ.

*ಕಾಲ್ಪನಿಕತೆ :* ಲೈಂಗಿಕ ಸಾಹಿತ್ಯ ಓದುವ ಇಲ್ಲವೇ ಲೈಂಗಿಕ ಚಿತ್ರಗಳನ್ನು ನೋಡುವ ಪುರುಷರು ಅದನ್ನು ಅನುಕರಿಸುತ್ತಾರೆ. ಇಲ್ಲವೇ ಮಹಿಳೆಯರನ್ನು ತಾವು ನೋಡಿದ್ದನ್ನು ಮಾಡುವಂತೆ ಒತ್ತಾಯಿಸುತ್ತಾರೆ.

*ವಾಸ್ತವತೆ :* ದೌರ್ಜನ್ಯ ಮತ್ತು ಬೆದರಿಕೆಯೊಡ್ಡುವ ತಂತ್ರಗಳು ಲೈಂಗಿಕ ಸಾಹಿತ್ಯದ ರಚನೆಗೆ ಮುಂಚಿನಿಂದಲೇ ಇವೆ ಮತ್ತು ಸಂಪ್ರದಾಯಬದ್ಧ ದೇಶಗಳಾದ ಏಷ್ಯಾ, ಆಫ್ರಿಕಾ ಮತ್ತು ಮಧ್ಯಪೂರ್ವ ದೇಶಗಳು ಕೂಡ ಇದಕ್ಕೆ ಹೊರತಲ್ಲ.

ಬಲಾತ್ಕಾರವೇ ಮೂಲಭೂತ ಸಮಸ್ಯೆ, ಕಾಮವಲ್ಲ. ಪ್ರಾಚೀನ ಕಾಲದಿಂದಲೇ ಎಲ್ಲ ಸಮಾಜಗಳಲ್ಲೂ ಲೈಂಗಿಕತೆಯ ಬಗೆಗೆ ಗ್ರಂಥಗಳು ಇರುವುದು ಕಂಡುಬರುತ್ತದೆ ಹಾಗೂ ಅರಸರ ಪ್ರಣಯ ಶೃಂಗಾರಭರಿತ ಕಥೆಗಳಿಂದಲೂ ಕೂಡ ಇದು ತಿಳಿದುಬರುತ್ತದೆ.

ಜನರು ತಾವು ನೋಡಿದ್ದನ್ನು, ಕೇಳಿದ್ದನ್ನು ಹಾಗೂ ಓದಿದ್ದನ್ನು ಹಾಗೆಯೇ ಅನುಕರಿಸುವುದಿಲ್ಲ. ತಾವು ನೋಡಿದ್ದರ, ಕೇಳಿದ್ದರ ಬಗ್ಗೆ ಯೋಚಿಸಿ ಹಾಗೂ ಇತರರೊಂದಿಗೆ ಚರ್ಚೆ ಮಾಡಿ ಯಾವುದು ಒಳ್ಳೆಯದು ಅಥವಾ ಕೆಟ್ಟದ್ದು ಎಂಬುದನ್ನು ತಮ್ಮ ಜೀವನದ ಅನುಭವಗಳ ಮೇಲೆ ನಿರ್ಧರಿಸುತ್ತಾರೆ. ಅನುಭವವೇ ಶಕ್ತಿಯುತ ಗುರು.

ಪುರುಷರು ಲೈಂಗಿಕ ಚಿತ್ರಗಳು ಇಲ್ಲವೇ ಗ್ರಾಫಿಕ್ಸ್‌ನಿಂದ ಅತ್ಯಾಚಾರ ಮಾಡುವುದನ್ನು ಕಲಿಯುವುದಿಲ್ಲ. ಅವರು ಇವನ್ನು ಹಿಂಸೆ ಹಾಗೂ ಮಹಿಳೆಯರ ಮೇಲಿನ ಅಗೌರವದಿಂದ ಕಲಿಯುತ್ತಾರೆ. ಇದಕ್ಕೆ ಅವರು ಬೆಳೆದಿರುವ ಪರಿಸರ, ವಾಸಿಸುವ ಪ್ರದೇಶ ಹಾಗೂ ಅವರು ಬೆರೆಯುವ ಕುಟುಂಬಗಳ, ಜನರ ರೀತಿ, ನೀತಿಗಳೇ ಕಾರಣವಾಗಿರುತ್ತವೆ.

ಕಟ್ಟು ಕಥೆಗಳು ಮತ್ತು ವರದಿಗಳು ಅತ್ಯಾಚಾರಿಗಳಿಗೆ ಮತ್ತು ಅಪರಾಧಿಗಳಿಗೆ ಅಪರಾಧದಿಂದ "ಅಶ್ಲೀಲ ಸಾಹಿತ್ಯ ಹಾಗೂ ಚಿತ್ರಗಳಿಂದ ನಾನು ಹೀಗೆ ಮಾಡಿದೆ" ಎಂದು ಹೇಳಿ ತಪ್ಪಿಸಿಕೊಳ್ಳಲು ಸಹಾಯವಾಗುತ್ತವೆ. ಮಹಿಳೆಯರ ವಿರುದ್ಧ ಅಪರಾಧ ಮಾಡಿದ ಅಪರಾಧಿಗಳನ್ನು ಶಿಕ್ಷಿಸದೇ ಬಿಟ್ಟುಬಿಡುತ್ತಾರೆ.

*ಕಾಲ್ಪನಿಕತೆ :* ಲೈಂಗಿಕ ಸಾಹಿತ್ಯ ಮತ್ತು ಚಿತ್ರಗಳು ಮಹಿಳೆಯರನ್ನು ಕೀಳುದರ್ಜೆಗೆ ಇಳಿಸುತ್ತವೆ.

*ವಾಸ್ತವತೆ :* ಲೈಂಗಿಕತೆ, ಪೂರ್ವಗ್ರಹ ಪೀಡಿತ ಅಥವಾ ಮಹಿಳೆಯರ ಬಗೆಗಿನ ಧೋರಣೆಯೇ ತಿಳುವಳಿಕೆ ಇಳಿಸುತ್ತದೆಯಾಗಲೀ ಕಾಮವಲ್ಲ. ಲೈಂಗಿಕತೆಯು ಜಗತ್ತಿನ ಉತ್ತರ ಮತ್ತು ದಕ್ಷಿಣ ಭಾಗಗಳಲ್ಲಿ ಸಮಕಾಲೀನ ಸಂಸ್ಕೃತಿಗಳಲ್ಲಿ ವಿಭಿನ್ನ ರೀತಿಯಲ್ಲಿ ವ್ಯಾಪಿಸಿಕೊಂಡಿದೆ, ಇದನ್ನು ಕಾಮವನ್ನು ನಿಷೇಧಿಸುವುದರಿಂದ ಹೋಗಲಾಡಿಸುವುದು ಅಸಾಧ್ಯ. ಲೈಂಗಿಕತೆ ಮತ್ತು ದೌರ್ಜನ್ಯಗಳು ದೀರ್ಘಕಾಲೀನ ಆರ್ಥಿಕ, ರಾಜಕೀಯ ಮತ್ತು ಭಾವನಾತ್ಮಕ ಸಂಗತಿಗಳಿಂದಾಗಿ ಹುಟ್ಟಿಕೊಳ್ಳುತ್ತದೆ.

ಮಹಿಳೆಯರು ಲೈಂಗಿಕ ಸಾಹಿತ್ಯ ಮತ್ತು ಚಿತ್ರಗಳ ಬಗ್ಗೆ ಬೇರೆ ಬೇರೆ ರೀತಿಯಲ್ಲಿ ಅರ್ಥೈಸುತ್ತಾರೆ. ಕೆಲವರು ಕಾಮುಕತೆಯೆನ್ನುತ್ತಾರೆ, ಇನ್ನು ಕೆಲವರು ಕನಸು ಹಾಗೂ

ಸಿನಿಮಾಗಳಂತೆ ಒಂದು ರೀತಿಯ ಭ್ರಮೆ ಹುಟ್ಟಿಸುತ್ತದೆಯೆನ್ನುತ್ತಾರೆ. ಇದು ಪ್ರತಿಯೊಬ್ಬರ ಲೈಂಗಿಕ ಸಂತೋಷ ಮತ್ತು ಸುಖವನ್ನು ಹೆಚ್ಚಿಸಿಕೊಳ್ಳುವುದಕ್ಕೆ ವಿವಿಧ ರೀತಿಯ ಸಂತೋಷಕರ ಸಾಮಗ್ರಿಗಳು ಸಹಾಯ ಮಾಡುತ್ತವೆಂಬುದನ್ನು ಲೈಂಗಿಕ ಸಂಭಾಷಣೆಯ ವಿರೋಧಿಗಳು ಅರ್ಥ ಮಾಡಿಕೊಳ್ಳುವಲ್ಲಿ ವಿಫಲರಾಗುತ್ತಾರೆ.

***ಕಾಲ್ಪನಿಕತೆ :*** ಲೈಂಗಿಕ ಸಾಹಿತ್ಯ ಮತ್ತು ಚಿತ್ರಗಳನ್ನು ನಿಷೇಧಿಸುವುದು ಮಹಿಳೆಯರಿಗೆ ರಕ್ಷಣೆ ನೀಡುವುದು.

***ವಾಸ್ತವತೆ :*** ದೋಷ ವಿಮರ್ಶೆ ಮಾಡುವುದು ಮಹಿಳೆಯರಿಗೆ ನೋವುಂಟು ಮಾಡುತ್ತದೆ. ಕಾಮ ಮತ್ತು ಸಂತಾನೋತ್ಪತ್ತಿಯ ಬಗೆಗಿನ ವಿಚಾರಗಳನ್ನು ಮಹಿಳೆಯರನ್ನು 'ರಕ್ಷಣೆ' ಮಾಡುತ್ತೇವೆಂದು ನಿಷೇಧಿಸಲಾಗಿದೆ. ಸಂವಿಧಾನದಲ್ಲಿರುವ ಅಭಿವ್ಯಕ್ತಿ ಸ್ವಾತಂತ್ರ್ಯವು ಮಹಿಳೆಯರ ವಿಚಾರಗಳು ಮತ್ತು ಧ್ವನಿಗಳಿಗೆ ರಕ್ಷಣೆ ಒದಗಿಸುತ್ತದೆ.

**4. ಲೈಂಗಿಕ ಹಲ್ಲೆ :**

ಮಹಿಳೆಯ ಇಚ್ಛೆಗೆ ವಿರೋಧವಾದ ಲೈಂಗಿಕ ಸಂಬಂಧವು ಅತ್ಯಾಚಾರವೆನಿಸಿಕೊಳ್ಳುತ್ತದೆ. ಇದನ್ನು ಕೆಲವು ಬಾರಿ ಲೈಂಗಿಕ ಹಲ್ಲೆಯೆಂದು ಕರೆಯಲಾಗುತ್ತದೆ ಏಕೆಂದರೆ ಕಾಮವನ್ನು ಆಯುಧವನ್ನಾಗಿ ಬಳಸುವಂತಹ ಹಿಂಸೆಯು ಒಂದು ಕ್ರಿಯೆಯಾಗಿರುತ್ತದೆ. ಅಧ್ಯಯನದ ವರದಿಗಳ ಪ್ರಕಾರ ಲೈಂಗಿಕ ಕ್ರಿಯೆಯ ಉತ್ಸಾಹದ ಕಾರಣವೊಂದೇ ಅತ್ಯಾಚಾರಕ್ಕೆ ಕಾರಣವಲ್ಲ, ಇದು ಹಲವಾರು ಬಾರಿ ಅಧಿಕಾರದ ವ್ಯವಸ್ಥೆಯೊಂದಿಗಿರುವ ನಂಟು ಕೂಡ ಆಗಿರುತ್ತದೆ. ಸದ್ಯದ ಸಾಮಾಜಿಕ ಆರ್ಥಿಕ ಪರಿಸ್ಥಿತಿಯ ಬದ್ಧತೆಯಿಂದ ಅಸಮಾಧಾನ ಹುಟ್ಟುತ್ತದೆ ಮತ್ತು ಅಸಮಾಧಾನದಿಂದ ಹಿಂಸೆ ಅಥವಾ ದೌರ್ಜನ್ಯ ಉಂಟಾಗುತ್ತದೆ.



## ಕಾಲ್ಪನಿಕ / ವಾಸ್ತವ

***ಕಾಲ್ಪನಿಕ :*** ಯಾವಾಗ ಮಹಿಳೆ 'ಇಲ್ಲ' ಎಂದು ಹೇಳುತ್ತಾಳೋ, ಅವಳು ನಿಜವಾಗಿಯೂ 'ಹೂಂ' ಎಂದಿರುತ್ತಾಳೆಂದರ್ಥ.

***ವಾಸ್ತವ :*** ಮಹಿಳೆಗೆ ಪುರುಷನು ಪರಿಚಿತನಾಗಿದ್ದು ಮತ್ತು ಅವಳು 'ಹೂಂ' ಎಂದರೂ 'ಇಲ್ಲ' ಎಂದರೂ ಅದು ಅತ್ಯಾಚಾರವೇ. ಆದ್ದರಿಂದ 'ಇಲ್ಲ' ಎಂದರೆ 'ಇಲ್ಲ' ಅವಳು ಒಪ್ಪಿಗೆಯಿಲ್ಲದೇ ನಡೆಯುವುದು ಅತ್ಯಾಚಾರ.

***ಕಾಲ್ಪನಿಕ :*** ಅಪರಿಚಿತರಿಂದಲೇ ಅತ್ಯಾಚಾರವಾಗುವುದು ಬಹುದೊಡ್ಡ ಅನರ್ಥ.

***ವಾಸ್ತವ :*** ಬಹಳಷ್ಟು ಅತ್ಯಾಚಾರಗಳು ಪರಿಚಿತರಿಂದಲೇ ಆಗುತ್ತವೆ. ಮಹಿಳೆಗೆ ಪರಿಚಯವಿರುವ ಹಾಗೂ ನಂಬಿಕೆಯುಳ್ಳ ಪುರುಷರೇ ಆಕ್ರಮಣ ಮಾಡುತ್ತಾರೆ. ಹಲವಾರು ಮಹಿಳೆಯರು ತಂತಮ್ಮ ಮನೆಗಳಲ್ಲೇ ಲೈಂಗಿಕ ಹಲ್ಲೆಗೆ ಗುರಿಯಾಗುತ್ತಾರೆ.

***ಕಾಲ್ಪನಿಕ :*** ಅನಿಯಂತ್ರಿಕ ಲೈಂಗಿಕ ಕಾಮನೆಗಳಿಂದ ಅತ್ಯಾಚಾರ ನಡೆಯುತ್ತದೆ. ಎಲ್ಲವೂ ಕಾಮಕ್ಕಾಗಿಯೇ.

***ವಾಸ್ತವ :*** ಕಾಮವನ್ನು ಆಯುಧವಾಗಿ ಬಳಸುವಂತಹ ಹಿಂಸಾತ್ಮಕ ಕ್ರಿಯೆಯೇ ಅತ್ಯಾಚಾರ. ಅಧಿಕಾರ ಮತ್ತು ವಿರೋಧವನ್ನು ಅತ್ಯಾಚಾರದಿಂದ ವ್ಯಕ್ತಪಡಿಸುತ್ತಾರೆ. ಇದು ಜೈವಿಕ ಪ್ರಕ್ರಿಯೆಯಲ್ಲ, ಸಾಮಾಜಿಕವಾದದ್ದು. ಬೋಸ್ನಿಯಾದಲ್ಲಿ ನಡೆದ ಇತ್ತೀಚಿನ ಘಟನೆಯಿಂದ ಇದು ವ್ಯಕ್ತವಾಗುತ್ತದೆ ಮತ್ತು ಅಲ್ಲಿ ಇದನ್ನು ರಾಜಕೀಯ ಆಯುಧವಾಗಿಯೂ ಸರ್ಬ್ಸ್‌ನಿಂದ ಅವರ ರಾಜಕೀಯ ವ್ಯೂಹ ರಚನೆಗೆ ಬಳಸಲಾಗಿತ್ತು.

***ಕಾಲ್ಪನಿಕ :*** ಮಹಿಳೆಯರು ಅತ್ಯಾಚಾರವಾಗಿದ್ದುದರ ಬಗಗೆ ಹೆಚ್ಚಿನಂಶ ಸುಳ್ಳು ಹೇಳುತ್ತಾರೆ.

***ವಾಸ್ತವ :*** ಅತ್ಯಾಚಾರದ ಸುಳ್ಳು ವರದಿಗಳು ಕೇವಲ ಶೇಕಡಾ 2 ರಿಂದ 4 ರಷ್ಟು ಬೇರೆ ಅಪರಾಧಗಳ ವರದಿಗಳಷ್ಟೇ ಇವು ಇರುತ್ತವೆ.

***ಕಾಲ್ಪನಿಕ :*** ಕೆಲವು ಹಿಂಸಾತ್ಮಕ ಮತ್ತು ಹೆಚ್ಚಿನ ಪ್ರಚಾರದ ಘಟನೆಗಳಿಂದಾಗಿ ಅತ್ಯಾಚಾರ ಪ್ರಕಾರಣವನ್ನು ಉತ್ಪ್ರೇಕ್ಷೆ ಮಾಡಲಾಗುವುದು.

ವಾಸ್ತವ : ಅಮೇರಿಕದಲ್ಲಿ ಪ್ರತಿ ವರ್ಷ ಪುರುಷರು ಮಿಲಿಯ ಗಟ್ಟಲೇ ಮಹಿಳೆಯರು, ಪುರುಷರು, ಹುಡುಗಿಯರು ಹಾಗೂ ಹುಡುಗರ ಮೇಲೆ ಅತ್ಯಾಚಾರ ಎಸಗುತ್ತಾರೆ.

ಕಾಲ್ಪನಿಕ : ವಿವಾಹದ ವಿಶೇಷ ಸಂಬಂಧದಿಂದಾಗಿ ಪತಿ 'ತನ್ನ' ಪತ್ನಿಯನ್ನು ಅತ್ಯಾಚಾರ ಮಾಡುವುದಿಲ್ಲ.

ವಾಸ್ತವ : ಒಪ್ಪಿಗೆಯಿಲ್ಲದ ಲೈಂಗಿಕ ಸಂಬಂಧವು ಅತ್ಯಾಚಾರ ಎನಿಸಿಕೊಳ್ಳುತ್ತದೆ. ವಿವಾಹ ಸಂಹಿತೆಯು ಅತ್ಯಾಚಾರಕ್ಕೆ ಲೈಸೆನ್ಸ್ ಅಲ್ಲ ಮತ್ತು ಅಧಿಕಾರ ಚಲಾಯಿಸಲು ಒಪ್ಪಿಗೆ ಪಡೆಯಲು ಅಲ್ಲ.

ಕಾಲ್ಪನಿಕ : ಕೇವಲ ಬಡವರು ಮತ್ತು ಅಲ್ಪ ವಿದ್ಯೆಯುಳ್ಳ ಪುರುಷರೇ ಅತ್ಯಾಚಾರಗೈಯುತ್ತಾರೆ.

ವಾಸ್ತವ : ಎಲ್ಲ ವರ್ಗ ಹಾಗೂ ಅಂತಸ್ತುಳ್ಳ ಪುರುಷರು, ವೈದ್ಯರು, ವಕೀಲರು, ಪ್ರೊಫೆಸರುಗಳು, ನ್ಯಾಯಮೂರ್ತಿಗಳು, ಪೊಲೀಸರು, ಗುಮಾಸ್ತರು, ಮ್ಯಾನೇಜರ್‌ಗಳು ಅತ್ಯಾಚಾರ ಮಾಡುತ್ತಾರೆ. ದಿ ಫ್ರೀ ಪ್ರೆಸ್ ಜರ್ನಲ್ (20-1-2000)ನಲ್ಲಿ, ಜುಹು, ಮುಂಬೈಯಲ್ಲಿ ಶ್ರೀ ಕಪೂರ್ ಎಂಬುವವರು ತಾವು ವಾಸವಾಗಿದ್ದ ಸುಸಜ್ಜಿತ ಫ್ಲಾಟ್ ಸಾಗರ ಸಂಗೀತದಲ್ಲಿ 18-2-2000ರಂದು ಮನೆ ಕೆಲಸದ ಅಂಜಲಿ ಎ. ಕೇಟ್ಕಲ್‌ರ ಮೇಲೆ ಅತ್ಯಾಚಾರ ಮಾಡಿದರೆಂದು ವರದಿ ಮಾಡಿತ್ತು.

ಕಾಲ್ಪನಿಕ : ಪುರುಷರು, ಪುರುಷರನ್ನೇ (ಹುಡುಗರು) ಅತ್ಯಾಚಾರ ಮಾಡುವವರು ಸಲಿಂಗ ಕಾಮಿಗಳಾಗಿರುತ್ತಾರೆ.

ವಾಸ್ತವ : ಬಹಳಷ್ಟು ಪುರುಷರು, ಪುರುಷರನ್ನೇ ಅತ್ಯಾಚಾರ ಮಾಡುವವರು ದ್ವಿಲಿಂಗಕಾಮಿಗಳೇ ಆಗಿರುತ್ತಾರೆ. ತಮ್ಮ ಪುರುಷತ್ವದ ಮೇಲಿನ ಅವನಂಬಿಕೆಯೇ ಕೆಲವು ಪುರುಷರನ್ನು ಹುಡುಗರ ಮೇಲೆ ಅತ್ಯಾಚಾರ ಮಾಡಲು ಪ್ರೇರೇಪಿಸುತ್ತದೆ. ಈ ಪುರುಷರು ವಿರೋಧಿಯ ಮೇಲೆ ಹಲ್ಲೆ ಮಾಡಲು ಮತ್ತು ಇನ್ನಿತರ ಮೇಲೆ ಅಧಿಕಾರ ಚಲಾಯಿಸಲು ಶಕ್ತಿ ಬೇಕೆಂದು ಹೀಗೆ ಮಾಡುತ್ತಾರೆ

ಕಾಲ್ಪನಿಕ : ಮಹಿಳೆಯ ಹಾವಭಾವಗಳಿಂದಲೇ ಯಾವಾಗ ಅವಳಿಗೆ 'ಲೈಂಗಿಕತೆ' ಬೇಕಾಗಿದೆಯೆಂದು ಪುರುಷ ಹೇಳುತ್ತಾನೆ.

ವಾಸ್ತವ : ಹಾವಭಾವಗಳನ್ನು ನೋಡಿಯೇ ನಾವು ಕಲ್ಪಿಸಿಕೊಳ್ಳುವುದಾದರೆ, ನಾವು ನಮ್ಮ ಇಚ್ಛೆಯನ್ನು ಸಂಗಾತಿಯ ಮೇಲೆ ಬಲವಂತವಾಗಿ ಹೇರಿದಂತಾಗುತ್ತದೆ. ಕಲ್ಪನೆಗಳಿಂದ, ಅನಿಸಿಕೆಗಳಿಂದಲೇ ಬಹಳಷ್ಟು ಬಾರಿ ಅತ್ಯಾಚಾರವಾಗುತ್ತದೆ.

ಕಾಲ್ಪನಿಕ : ಪುರುಷನ ನಂಬಿಕೆ = ಮಹಿಳೆಯ ನಂಬಿಕೆ.

ವಾಸ್ತವ : ಪುರುಷರ ಒಂದು ಗುಂಪನ್ನು "ನೀವೇಕೆ ಮಹಿಳೆಯರಿಗೆ ಹೆದರುತ್ತೀರಿ?" ಎಂದು ಕೇಳಿದಾಗ ಅವರ ಪ್ರತಿಕ್ರಿಯೆ, "ಅವರು ನಮ್ಮನ್ನು ಕಂಡು ನಗಬಹುದೆಂದು ಭಯವೆನ್ನಿಸುತ್ತದೆ." ಒಂದು ಗುಂಪಿನ ಮಹಿಳೆಯರನ್ನು ನಂತರ ಕೇಳಿದರು "ಪುರುಷರಿಗೇಕೆ ನೀವು ಹೆದರುತ್ತೀರಿ?" ಅವರ ಉತ್ತರ "ಅವರು ನಮ್ಮನ್ನು ಕೊಲ್ಲಬಹುದೆಂದು ಹೆದರುತ್ತೇವೆ."

ಕಾಲ್ಪನಿಕ : ಪತಿಪತ್ನಿ ಲೈಂಗಿಕ ಕ್ರಿಯೆಯಲ್ಲಿ ಪಾಲ್ಗೊಳ್ಳುತ್ತಾರೆ; ಅವನು ಅವಳನ್ನು ಕೇಳುವುದಿಲ್ಲ, ಅವಳೂ ಬೇಡವೆಂದು ಹೇಳುವುದಿಲ್ಲ. ಅದು ಅತ್ಯಾಚಾರವೆನಿಸಿ ಕೊಳ್ಳುವುದಿಲ್ಲ.

ವಾಸ್ತವ : ಕೇಳದೇ ಇರುವ ಪ್ರಶ್ನೆಗೆ ಉತ್ತರ ಬಾರದಿರುವುದು ಒಪ್ಪಿಗೆ ಎನಿಸುವುದಿಲ್ಲ. ಅಧೀನತೆಯು ಒಪ್ಪಿಗೆ ಆಗುವುದಿಲ್ಲ. ಒಪ್ಪಿಗೆಯಿಲ್ಲದ ಲೈಂಗಿಕ ಕ್ರಿಯೆ ಅತ್ಯಾಚಾರಕ್ಕೆ ದಾರಿ ಮಾಡಿಕೊಡುತ್ತದೆ.

ಕಾಲ್ಪನಿಕ : 'ಸಾಮಾನ್ಯ' ಸ್ಥಿತಿಯಲ್ಲಿರುವ ಪುರುಷರು ಅತ್ಯಾಚಾರ ಮಾಡುವುದಿಲ್ಲ.

ವಾಸ್ತವ : ಪತಿ, ತಂದೆ, ಇನ್ನಿತರ ಕುಟುಂಬದ ಸದಸ್ಯರು, ಗೆಳೆಯರು ಸಹೋದ್ಯೋಗಿಗಳು, ಸಹವಿದ್ಯಾರ್ಥಿಗಳೇ ಬಹಳಷ್ಟು ಅತ್ಯಾಚಾರ ಪ್ರಕರಣಗಳಲ್ಲಿ ಭಾಗಿಗಳಾಗಿರುತ್ತಾರೆ.

ಕಾಲ್ಪನಿಕ : ಅತ್ಯಾಚಾರವಾದಾಗ ಅದನ್ನು ನಿಲ್ಲಿಸಲು ಯಾರಿಂದಲೂ ಏನೂ ಮಾಡಲಾಗುವುದಿಲ್ಲ. ಇದು 'ಹಣೆಬರಹ' (ದುರಾದೃಷ್ಟ)ದ ಪರಿಸ್ಥಿತಿಯಾಗಿರುತ್ತದೆ.

ವಾಸ್ತವ : ಪ್ರತಿದಿನವೂ ಅತ್ಯಾಚಾರವನ್ನು ಬೆಂಬಲಿಸುವಂತಹ ನಡತೆಯನ್ನು ಬದಲಾಯಿಸಿಕೊಳ್ಳಲು ಅವಕಾಶಗಳಿರುತ್ತವೆ. ಪುರುಷ ಅತ್ಯಾಚಾರವನ್ನು ಮಾಡುತ್ತಾನಾದ್ದರಿಂದ ಅದನ್ನು ನಿಲ್ಲಿಸುವುದು ಕೂಡ ಅತನದೇ ಜವಾಬ್ದಾರಿಯಾಗಿದೆ.

## ಅತ್ಯಾಚಾರ ತಡೆಯುವುದು ಹೇಗೆ?

* ರಾತ್ರಿ ಒಂಟಿಯಾಗಿ ತಿರುಗಾಡಬೇಡ ಅದು ಪುರುಷರಿಗೆ ಉತ್ತೇಜನ ನೀಡುತ್ತದೆ.
* ಯಾವುದೇ ಸಮಯದಲ್ಲಿಯೂ ಒಂಟಿಯಾಗಿ ತಿರುಗಾಡಬೇಡ, ಯಾವುದೇ ಪರಿಸ್ಥಿತಿ ಕೆಲವು ಪುರುಷರಿಗೆ ಉತ್ತೇಜನ ನೀಡುತ್ತದೆ.
* ಮನೆಯಲ್ಲಿಯೇ ಇರಬೇಡ ಪರಿಚಿತರು ಹಾಗೂ ಸಂಬಂಧಿಕರು ಅತ್ಯಾಚಾರಗೈಯಬಹುದು
* ಉಡುಪು ಧರಿಸದೇ ಹೋಗಬೇಡ, ಅದು ಪುರುಷರಿಗೆ ಉತ್ತೇಜನ "ನೀಡಬಹುದು.
* ಉಡುಪು ಧರಿಸಿ ಹೋಗಬೇಡ ಕೆಲವು ಪುರುಷರಿಗೆ ಯಾವುದೇ ರೀತಿಯ ಉಡುಪು ಉತ್ತೇಜನ ನೀಡುವುದು.

* ಬಾಲ್ಯವನ್ನು ದೂರೀಕರಿಸು, ಕೆಲವು ಅತ್ಯಾಚಾರಿಗಳು ಪುಟ್ಟ ಹುಡುಗಿಯರ ಮೇಲೆರಗುತ್ತಾರೆ
* ವಯಸ್ಕಳಾಗುವುದನ್ನು ದೂರೀಕರಿಸು, ಕೆಲವು ಅತ್ಯಾಚಾರಿಗಳು ವಯಸ್ಸಾದ ಮಹಿಳೆಯರನ್ನು ಅಪೇಕ್ಷಿಸುತ್ತಾರೆ.
* ತಂದೆಯಿರುವುದು ಬೇಡ, ತಾತನೂ ಬೇಡ, ಚಿಕ್ಕಪ್ಪ ಬೇಡ, ಅಣ್ಣ-ತಮ್ಮ ಬೇಡ...
* ಇಂತಹ ಬಂಧಗಳೇ ಅನೇಕ ಸಲ ಹರೆಯದ ಮಹಿಳೆಯರ ಅತ್ಯಾಚಾರಗೈಯುತ್ತಾರೆ.
* ನೆರೆಹೊರೆಯವರಿರುವುದು ಬೇಡ, ಅನೇಕ ಬಾರಿ ಇವರೂ ಅತ್ಯಾಚಾರವೆಸಗುತ್ತಾರೆ.
* ಮದುವೆಯಾಗಬೇಡಿ, ಅತ್ಯಾಚಾರವು ವಿವಾಹ ಬಂಧನದಲ್ಲಿ ಕಾನೂನು ಸಮ್ಮತಿ ಹೊಂದಿದೆ
* ಪ್ರಮಾಣಿಕವಾಗಿ ಹೇಳಬೇಕೆಂದರೆ ನಿನ್ನ ಅಸ್ತಿತ್ವವೇ ಬೇಡ!

*(ಲಂಡನ್‌ನಲ್ಲಿ ರೇಪ್ ಕ್ರೈಸಿಸ್ ಸೆಂಟರ್‌ನಲ್ಲಿಯ ಅತ್ಯಾಚಾರ ತಡೆಯುವುದು ಹೇಗೆಂಬುದರ ಬಗೆಗಿನ ಉಕ್ತಿ)*

## ಐರಿಷ್ ಬೆಣ್ಣೆಯ ಕಥೆ

**ಕುಂದಾಪುರ:**

ಅಣು ವಿಕಿರಣಗೊಂಡಂತಹ 16 ಸಾವಿರ ಟನ್ ಬೆಣ್ಣೆಯನ್ನು ಐರ್ಲೆಂಡ್ ದೇಶ ಬೇರೆ ಯಾವುದೇ ದೇಶದಲ್ಲಿ ಅಥವಾ ಸೂಕ್ತ ಸ್ಥಳ ಸಿಗದೆ ಹೋದಾಗ ಅದನ್ನು ನಮ್ಮ ದೇಶದ ಮುಂಬೈಗೆ ಸಾಗಿಸಿ ಅಲ್ಲಿ ಅದನ್ನು ಮಾರಾಟ ಮಾಡಿದ ಸಂಗತಿಯನ್ನು ಡಾ. ರವೀಂದ್ರನಾಥ್ ಶ್ಯಾನುಬಾಗ್ ಪತ್ರಿಕಾ ದಿನಾಚರಣೆಯ ಸಂದರ್ಭದಲ್ಲಿ ಬಹಿರಂಗಗೊಳಿಸಿದ್ದಾರೆ.

ಚರ್ನೊಬಿಲ್‌ನಲ್ಲಿ ಅಣು ಅಪಘಾತ ಉಂಟಾದಾಗ ಐರ್ಲೆಂಡಿನಲ್ಲಿ ತಯಾರಿಸಿದ 16 ಸಾವಿರ ಟನ್ ಬೆಣ್ಣೆ ದಾಸ್ತಾನು ಅಣುವಿಕಿರಣಗೊಂಡಿತ್ತು. ಇದನ್ನು ಮೊದಲು ಫೆಸಿಫಿಕ್ ಸಾಗರದಲ್ಲಿ ಮುಳುಗಿಸಲು ಪ್ರಯತ್ನಿಸಿದರು, ಆದರೆ ಅದಕ್ಕೆ ಜನ ಬಿಡದ ಕಾರಣ ಬೇರೆ ಯಾವ ರಾಷ್ಟ್ರವೂ ಈ ಬೆಣ್ಣೆ ತರಬೇಡಿ ಎಂದು ನಿಷೇಧಿಸಿದವು. ಕೊನೆಗೆ ಈ ಬೆಣ್ಣೆ ಏನಾಯ್ತು ಎಂದರೆ, ಅದನ್ನು ತಂದು ನಮ್ಮ ದೇಶದ ಮುಂಬೈ ತೀರ ಕೇಂದ್ರಕ್ಕೆ ರವಾನಿಸಿ. ಅಲ್ಲಿಂದ ಅದನ್ನು ಭಾರತದ ಜನಗಳಿಗೆ ತಿಳಿಯದಂತೆ ಅದನ್ನು ವಿತರಿಸಲಾಯ್ತು ಎಂದು ಅವರು ವಿಷಾದಿಸಿದರು. ನಿಜಕ್ಕೂ ಈ ಸ್ಥಿತಿ ತುಂಬಾ ಭಯಾನಕವೂ ಮತ್ತು ಸಂಧಿಗ್ಧತೆಯಿಂದಲೂ ಕೂಡಿದೆ ಎನ್ನಬಹುದು.

## ಗೆಲುವು ನಮ್ಮದೇ

○ ರೂಪ

ಬೇಕಿಲ್ಲ ಗೆಳತಿ ನಮಗೆ ಯಾರ ಭಿಕ್ಷೆ,
ಆತ್ಮ ವಿಶ್ವಾಸವೇ ನಮಗೆ ಶ್ರೀರಕ್ಷೆ

ಇಲ್ಲಿ ನೀಲಿ ಬಾನಿಲ್ಲ
ಮಿನುಗುವ ತಾರೆಗಳಿಲ್ಲ

..................................

ಅದಿಲ್ಲ, ಇದಿಲ್ಲ
ಇಲ್ಲ. ಏನೇನೂ ಇಲ್ಲ!
'ಇಲ್ಲ'ಗಳ ಬದಿಗೊತ್ತಿ
'ಎಲ್ಲ'ವಾಗುವ ಛಲ
ನಮ್ಮಲೇಕಿಲ್ಲಾ?

ಛಲವೊಂದಿದ್ದರೆ ಸಾಕು
ಬರೀ ಹಿಮಾಲಯಕೇ ಏನು?
ಬಾಂದಳಕೇ ದಾರಿ ಕಟ್ಟಬಲ್ಲೆವು!
ನಾವು!

ಅವರಿವರ ಅಡಿಗಳ ಕೆಳಗಿನ
ನಮ್ಮ ನುಡಿಯುಳಿಸುವುದಷ್ಟೇ ಅಲ್ಲ
ಅವರ ನೆತ್ತಿಯ ಮೇಲೆ
ನಮ್ಮ ಪಡಿ ಮೂಡಿಸಬೇಕು ಗೆಳತಿ!

ಇಲ್ಲಿ ದಾರಿಗಳೆಲ್ಲ
ಹಳ್ಳ-ಕಂದರ, ಶಿಖರ-ಪ್ರಪಾತಗಳೇ ಎಲ್ಲಾ!
ಅಂತರ ದಾಟಲು, ಮೀರಿ ನಿಲ್ಲಲು
ತಕ್ಕ ಅವಕಾಶಕೆ ಕಾಯಲೇಬೇಕು!

ಕಾಯಲಿಲ್ಲವೇ ನನ್ನ ನಿನ್ನಂತೆಯೇ
ಮೈಥಿಲಿ-ಪಾಂಚಾಲಿ, ಅಹಲ್ಯೆ-ಶಕುಂತಲೆ?
ತಮ್ಮ ತಮ್ಮ ಗೆಲುವಿಗಾಗಿ?
ತಾಳ್ಮೆಯೇ ಇಲ್ಲಿ ತಪ! ಗೆಳತಿ
ಇಂದಲ್ಲ ನಾಳೆ ಗೆದ್ದೇಗೆಲ್ಲುವೆವೆಂಬ
ವಿಶ್ವಾಸ,
ಆ ಘಳಿಗೆಗಾಗಿ ತಾಳ್ಮೆಯಿಂದ ಕಾಯ್ವ
ಶ್ವಾಸ,
ನಮ್ಮದಾದರೆ.......
ಗೆಲುವು ನಮ್ಮದೇ!

ಮಾನಸ ಪತ್ರಿಕೆ ಯಾವ ಸಂಸ್ಥೆಯ, ಸರ್ಕಾರದ ನೆರವಿಲ್ಲದೇ ಪ್ರಕಟವಾಗುತ್ತಿರುವ ಮಹಿಳೆಯರೇ ನಡೆಸುತ್ತಿರುವ ಸ್ವಾಯತ್ತ ಪತ್ರಿಕೆ. ಓದುಗರು ಹಾಗೂ ಸಹೃದಯರು ನೀಡುವ ಆರ್ಥಿಕ ನೆರವೇ ಪತ್ರಿಕೆಯ ಜೀವಾಳ. ಚಂದಾದಾರರಿಗೆ ಚಂದಾ ಅವಧಿ ಮುಕ್ತಾಯವಾದುದರ ಬಗ್ಗೆ ಸೂಚನೆಯನ್ನು ನೀಡಲಾಗುತ್ತದೆ. ಓದುಗರು ತಕ್ಷಣ ಚಂದಾ ನವೀಕರಿಸಬೇಕೆಂದು ಕೋರುತ್ತೇವೆ. ಪತ್ರಿಕೆಯು ಉಳಿದು ಬೆಳೆಯಬೇಕಾದರೆ ಓದುಗರ ಸಹಕಾರ ಅತ್ಯಗತ್ಯ.

**ವಾರ್ಷಿಕ ಚಂದಾ : 40 ರೂ.**

**ಸಂಸ್ಥೆಗಳಿಗೆ : 100 ರೂ.**

*ಸಂ. ಮಂಡಳಿ*

REGD No. CPMG/KA/BGE/289/2000

BOOK -POST
PRINTED MATTER

ವಿಳಾಸ :
**ಮಾನಸ**
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು - 560 067